



## ಚೆನ್ನವೀರ ಕಣವಿ ಹಾಗೂ ಜಿ.ಎಸ್. ಶಿವರುದ್ರಪ್ಪ

# ಶಿವರ ಕಾವ್ಯ

[ತೌಲನಿಕ ವಿವೇಚನೆ]

ಕರ್ನಾಟಕ ಸಂಘದ ಪ್ರಕಟಣೆ – ೧

# ಚೆನ್ನವೀರ ಕಣವಿ ಹಾಗೂ ಜಿ. ಎಸ್. ಶಿವರುದ್ರಪ್ಪ

# ಅವರ ಕಾವ್ಯ

[ ತೌಲನಿಕ ವಿವೇಚನೆ ]

ಗೆ,
ಶ್ರೀ ಚೆನ್ನವೀರ ಕಣವಿ.
ಗೌರವಪೂರ್ವಕವಾಗಿ ನಾ ಪ್ರತಿಗಳು.
— ಎನ್. ಎಫ್. ದ್ಯಾವನಗೌಡರ

ಸಂಪಾದಕರು :

ಪ್ರಾ. ಎ. ಬಿ. ಹಿರೇಮಠ
ಶ್ರೀ ಆರ್. ಎಲ್. ಪೋಲೀಸಪಾಟೀಲ
ಶ್ರೀ ಎನ್. ಎಫ್. ದ್ಯಾವನಗೌಡರ

ಪ್ರಕಾಶಕರು :

ಕರ್ನಾಟಕ ಸಂಘ, ಕೆ. ಆರ್. ಬೆಲ್ಲದ ಕಾಲೇಜ
ಮುಂಡರಗಿ

೧೯೬೧

CHEENNAVEER KANAVI MATTU SHIVARUDRAPPA AVAR KAVYA : A colletion of essays presented at a seminar, organised by the Karnatak Sangha, K. R. Bellad Arts and Commerce College, Mundargi-582 118. Edited by Prin. A. B. Hiremath, Shri R. L. Police Patil and Shri N. F. Dyavanagoudar ; Published by Karnatak Sanga, Mundargi 1991. Pages 144+8, Price : Rs. 20-00



ಮೊದಲ ಮುದ್ರಣ : ೧೯೯೧

ಒಂದು ಸಾವಿರ ಪ್ರತಿಗಳು

ಬೆಲೆ : ರೂ. ೨೦-೦೦

ಮುದ್ರಕರು :

ವಿಜಯ ಹೊಸಕೇರಿ

ವಿಜಯ ಮುದ್ರಣಾಲಯ, ಧಾರವಾಡ-೧.

ರಕ್ಷಾಪುಟ :

ಮನೋಹರ ಮುದ್ರಣಾಲಯ,

ಧಾರವಾಡ-೧.

# ಅರಿಕೆ

ಕನ್ನಡ ಸಾಹಿತ್ಯದ ಬೆಳವಣಿಗೆಯ ಸಂದರ್ಭದಲ್ಲಿ ಇದು ನವ್ಯ, ಇದು ನವೋದಯ ಎನ್ನುವ ಜಗ್ಗಾಟಕ್ಕೆ ಸಿಗದ ಶ್ರೀ ಚೆನ್ನವೀರ ಕಣವಿ ಹಾಗೂ ಜಿ. ಎಸ್. ಶಿವರುದ್ರಪ್ಪ ಇವರು ತಮ್ಮದೇ ಆದ ನೆಲೆಯಲ್ಲಿ ನಿಂತು ಕಾವ್ಯ ರಚಿಸಿದವರು. ದಕ್ಷಿಣ ಕರ್ನಾಟಕ ಉತ್ತರ ಕರ್ನಾಟಕಗಳನ್ನು ಪ್ರತಿನಿಧಿಸುವ ಈ ಇಬ್ಬರೂ ಕವಿಗಳಲ್ಲಿ ಸಾಮ್ಯತೆ ಇದೆ. ಇಬ್ಬರೂ ತಮ್ಮ ತಮ್ಮ ಭಾಗದ ಹಿರಿಯ ಕವಿಗಳಿಂದ ಸ್ಫೂರ್ತಿಗೊಂಡವರು. ಕಣವಿಯವರ ಪ್ರಾರಂಭಿಕ ಕವನಗಳು ಬೇಂದ್ರೆ ಕಾವ್ಯದಿಂದ ಪ್ರಭಾವಿತಗೊಂಡರೆ. ಶಿವರುದ್ರಪ್ಪನವರ ಕವನಗಳು ಕುವೆಂಪು ಕಾವ್ಯ ದಿಂದ ಸ್ಫೂರ್ತಿ ಪಡೆದಿವೆ. ಶಿವರುದ್ರಪ್ಪನವರು “ ಸಾಮಗಾನ ” ಸಂಕಲನದಿಂದ ಬೆಳೆಯುತ್ತ ಬಂದ ಕವಿಯಾದರೆ. ಕಣವಿಯವರು ‘ ಕಾವ್ಯಾಕ್ಷಿ ’ ಯಿಂದ ಬೆಳೆಯುತ್ತ ಬಂದ ಕವಿ. ಇವರು ನಿಸರ್ಗದ ಚೆಲುವು, ಮಾತಿನ ಮೋಹಕತೆಗಳನ್ನು ದಾಟಿ, ಜೀವನದ ಸಂಕೀರ್ಣತೆಯನ್ನು ನಿರ್ಲಿಪ್ತವಾಗಿ ಕವನಗಳಲ್ಲಿ ಅಡಗಿಸಬಲ್ಲವರು. ಚೆಲುವು–ಆನಂದಗಳನ್ನು ಕೃತಜ್ಞತೆಯಿಂದ ಸ್ವೀಕರಿಸುವ, ಬಾಳಿನ ವಾಸ್ತವಿಕ ಸ್ವರೂಪದ ಅರಿವನ್ನು ರಕ್ತಗತ ಮಾಡಿಕೊಂಡು ಲವಲವಿಕೆಯ ಭಾಷೆಯಲ್ಲಿ ಕಸಿ ಮಾಡುವ ಈ ಕವಿಗಳು ಭಿನ್ನ ಭೌಗೋಲಿಕ ಪರಿಸರ ಹೊಂದಿದ್ದರೂ, ಇಬ್ಬರ ಕಾವ್ಯದಲ್ಲಿ ಒಂದೇ ಧ್ವನಿ, ಒಂದೇ ಭಾವ ಇದೆ.

ಕನ್ನಡದ ಎರಡು ಕಣ್ಣುಗಳಂತಿರುವ ಇವರ ಕಾವ್ಯದ “ತುಲನಾತ್ಮಕ ವಿವೇಚನೆ” ಯ ವಿಚಾರಸಂಕಿರಣವನ್ನು ನಮ್ಮ ಮಹಾವಿದ್ಯಾಲಯದ ಕರ್ನಾಟಕ ಸಂಘದ ಆಶ್ರಯದಲ್ಲಿ ೧೯೯೦ ಜನೇವರಿಯಲ್ಲಿ ಏರ್ಪಡಿಸಲಾಗಿತ್ತು. ಆ ವಿಚಾರಸಂಕಿರಣದಲ್ಲಿ ವಿದ್ವಾಂಸರು ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ ಈ ಕೃತಿ. ಕನ್ನಡ ಕ್ಯಾವ ಲೋಕದ ಮಹತ್ವದ ಕವಿಗಳ ವೈಚಾರಿಕ ವಿಮರ್ಶೆ ಈ ಗ್ರಂಥದಲ್ಲಿದೆ. ಇದು ಸಾಹಿತ್ಯಾಸಕ್ತರಿಗೆ ಉಪಯುಕ್ತ ಗ್ರಂಥವಾದೀತೆಂದು ಆಶಿಸುತ್ತೇವೆ.

೧೯೮೩-೮೪ ರಿಂದ ಪ್ರತಿ ವರ್ಷ ವಿಚಾರಸಂಕಿರಣಗಳನ್ನು ಏರ್ಪಡಿಸುತ ಬಂದಿರುವ ನಮ್ಮ ಕಾಲೇಜಿನ 'ಕರ್ನಾಟಕ ಸಂಘ' ದ ಹೆಸರಿನಲ್ಲಿ ಪ್ರಕಟಗೊಳ್ಳು ತ್ತಿರುವ ಪ್ರಥಮ ಪುಷ್ಪವಾಗಿ ಈ ಗ್ರಂಥ ಹೊರಬರುತ್ತಲಿದೆ. ಈ ಪೂರ್ವದಲ್ಲಿ ನಾವು ಹಮ್ಮಿಕೊಂಡಿದ್ದ ವಿಚಾರಸಂಕಿರಣದ ಪ್ರಬಂಧಗಳು. ೧. ಆಧುನಿಕ ಕನ್ನಡ ಸಾಹಿತ್ಯ ಸಮೀಕ್ಷೆ ೨. ಹರ್ಡೇಕರ ಮಂಜಪ್ಪನವರು ಹೆಸರಿನಿಂದ ಶ್ರೀ ಜಗದ್ಗುರು ಅನ್ನದಾನೀಶ್ವರ ಗ್ರಂಥಮಾಲೆಯ ಮೂಲಕ ಪ್ರಕಟಗೊಂಡಿವೆ.

ನಮ್ಮ ಕಾರ್ಯಗಳಿಗೆ ಕೃಪಾಶೀರ್ವಾದದ ಧಾರೆ ಎರೆದು ಪ್ರೋತ್ಸಾಹಿಸು ತ್ತಿರುವ ತ್ರಿಭಾಷಾ ಪಂಡಿತರೂ ವಿದ್ವಾಂಸರೂ ಶಿಕ್ಷಣ ಪ್ರೇಮಿಗಳೂ ಆದ ಶ್ರೀ ಮ. ನಿ. ಪ್ರ. ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳವರಿಗೆ ಭಕ್ತಿ ನಮನ ಗಳನ್ನು ಸಲ್ಲಿಸುವೆವು. ಈ ವಿಚಾರ ಸಂಕಿರಣ ಏರ್ಪಡಿಸುವದರಿಂದ ಹಿಡಿದು ಗ್ರಂಥ ಹೊರಬರುವವರೆಗೆ ಆಸ್ಥೆವಹಿಸಿ ಮಾರ್ಗದರ್ಶನ ನೀಡಿದ ಸುಪ್ರಸಿದ್ಧ ಸಂಶೋಧಕರಾದ ಕರ್ನಾಟಕ ವಿಶ್ವವಿದ್ಯಾಲಯದ ಡಾ. ಎಂ. ಎಂ. ಕಲಬುರ್ಗಿ ಯವರಿಗೆ ನಾವು ಚಿರಋಣಿಯಾಗಿದ್ದೇವೆ. ವಿಚಾರಸಂಕಿರಣದಲ್ಲಿ ಭಾಗವಹಿಸಿ ಲೇಖನ ಬರೆದುಕೊಟ್ಟು ಸಹಕರಿಸಿದ ಡಾ. ಜಿ. ಎಸ್. ಆಮೂರ, ಡಾ. ಜಿ. ಎಸ್. ಶಿವರುದ್ರಪ್ಪ ಶ್ರೀ ಚೆನ್ನವೀರ ಕಣವಿ ಪ್ರೊ. ಸಿದ್ಧಲಿಂಗ ಪಟ್ಟಣಶೆಟ್ಟಿ, ಶ್ರೀ ಸುಬ್ಬರಾಯ ದೇಶಪಾಂಡೆ, ಡಾ. ವಾಮನ ಬೇಂದ್ರೆ, ಡಾ. ಬಸವರಾಜ ಸಬರದ ಪ್ರೊ. ಜಿ. ಎಸ್. ಅವಧಾನಿ, ಡಾ. ಬಸವಲಿಂಗ ಸೊಪ್ಪಿಮಠ ಇವರಿಗೆಲ್ಲ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುವೆವು.

ಈ ಗ್ರಂಥದ ಮುಖಪುಟಕ್ಕೆ ಆಕರ್ಷಕ ಕಲಾ ವಿನ್ಯಾಸ ಒದಗಿಸಿದ ಕಲಾ ವಿದ ಶ್ರೀ ಮಹಾಲೆಯವರಿಗೂ ಅಲ್ಪಾವಧಿಯಲ್ಲಿ ಸುಂದರವಾಗಿ ಮುದ್ರಿಸಿ ಕೊಟ್ಟ ಧಾರವಾಡದ ವಿಜಯ ಮುದ್ರಣಾಲಯ ಹಾಗೂ ಮುಖಪುಟ ಮುದ್ರಿಸಿದ ಮನೋಹರ ಮುದ್ರಣಾಲಯದವರಿಗೂ ಧನ್ಯವಾದಗಳು. ನಮ್ಮೆಲ್ಲ ಕಾರ್ಯಗಳಲ್ಲಿ ಸಹಭಾಗಿಗಳಾಗಿ ಸಹಕರಿಸುತ್ತಿರುವ ಮಹಾವಿದ್ಯಾಲಯದ ಸಹೋದ್ಯೋಗಿಗಳಿಗೆ ಹಾಗೂ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ, ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಾಯ ನೀಡಿದ ಎಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳು.

— ಸಂಪಾದಕರು

## ಪರಿವಿಡಿ

# ಲೇಖಕರ ವಿಳಾಸ

೧. **ಶ್ರೀ ದೇಶಪಾಂಡೆ ಸುಬ್ಬರಾಯ**
ಭಂಡಿವಾಡ ಕಂಪೌಂಡ್,
ಮಾಳಮಡ್ಡಿ, ಧಾರವಾಡ-೫೮೦೦೦೭

೨. **ಪ್ರೊ. ಸಿದ್ದಲಿಂಗ ಪಟ್ಟಣಶೆಟ್ಟಿ**
ಹೂಮನೆ, ಶ್ರೀದೇವಿನಗರ
ವಿದ್ಯಾಗಿರಿ, ಧಾರವಾಡ-೫೮೦೦೦೪

೩. **ಡಾ. ಬಸವರಾಜ ಸಬರದ**
ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ
ಗುಲ್ಬರ್ಗಾ-೫೮೫೧೦೬

೪. **ಪ್ರೊ. ಜಿ. ಎಸ್. ಅವಧಾನಿ**
ಎಸ್. ಡಿ. ಎಂ. ಕಾಲೇಜು
ಹೊನ್ನಾವರ, (ಉ. ಕ.) ೫೮೧೦೩೪

೫. **ವಾಮನ ಬೇಂದ್ರೆ**
ಶ್ರೀಮಾತಾ, ಸಾಧನಕೇರಿ
ಧಾರವಾಡ-೫೮೦೦೦೮

೬. **ಡಾ. ಬಸವಲಿಂಗ ಸೊಪ್ಪಿಮಠ**
ಬಿ. ಆರ್. ಕಾಮರ್ಸ್ ಕಾಲೇಜು
ರಾಯಚೂರ, ೫೮೪೧೦೧

೭. **ಡಾ. ಜಿ. ಎಸ್. ಶಿವರುದ್ರಪ್ಪ**
'ಚೈತ್ರ' ೮೬೭, ಬನಶಂಕರಿ-೨ನೇ ಹಂತ
೧೮ನೇ ಮೇನ್. ಬೆಂಗಳೂರು-೫೬೦೦೭೦

೮. **ಶ್ರೀ ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ
ಧಾರವಾಡ-೫೮೦೦೦೭

೯. **ಡಾ. ಜಿ. ಎಸ್. ಆಮೂರ**
'ಜಾನಕಿ' ನವೋದಯ ನಗರ,
ಧಾರವಾಡ-೫೮೦೦೦೩

# ಕಾವ್ಯವಸ್ತುವಿನ ಸ್ವರೂಪ

ದೇಶಪಾಂಡೆ ಸುಬ್ಬರಾಯ

ಪ್ರತಿಯೊಬ್ಬ ಕವಿಗೆ ಆತನದೇ ಆದ ಒಂದು 'ವೈಶಿಷ್ಟ್ಯ'ವಿರುತ್ತದೆ ಮತ್ತು ಈ ವೈಶಿಷ್ಟ್ಯ ಆತನನ್ನು 'ಗುಂಪಿ'ನಿಂದ ಪ್ರತ್ಯೇಕವಾಗಿರುವ 'ವ್ಯಕ್ತಿತ್ವ'ವನ್ನಿತ್ತು, ಒಂದು ಭಿನ್ನವೇ ಆದ ಪ್ರತ್ಯೇಕ ಅಭ್ಯಾಸಕ್ಕೆ ಯೋಗ್ಯವಾದ 'ಆತ'ನನ್ನಾಗಿಸುತ್ತದೆ. ಈ ದೃಷ್ಟಿಯಿಂದ ಒಬ್ಬ ಕವಿ ಹೆಚ್ಚು ಹೆಚ್ಚು ಮುಖ್ಯನಾಗುತ್ತ ಹೋಗುವದು ಎಂದರೆ ಆತನ ಈ ವೈಶಿಷ್ಟ್ಯ ಕ್ರಮಾಕ್ರಮೇಣ ಆಳಕ್ಕಿಳಿದು, ಅಗಲಕ್ಕೆ ಹರಡಿ, ಪಕ್ವವಾಗಿ ಹರಳುಗಟ್ಟಿ ಇನ್ನಷ್ಟು ಹೆಚ್ಚು ಅಭ್ಯಾಸಯೋಗ್ಯನನ್ನಾಗಿಸುತ್ತದೆ. ಈ ಮಧ್ಯ ಅನೇಕ ಹೊರಳುವಿಕೆಗಳು, ಬೆಳವಣಿಗೆಗಳು, ಪುನರ್ಮೌಲೀಕರಣಗಳು, ಸ್ವಯಂ ಜಿಜ್ಞಾಸೆಗಳು, ಚಿಕಿತ್ಸಕತೆಗಳು ನಡೆದು, ಆತ ಇನ್ನಷ್ಟು ಎತ್ತರಕ್ಕೆ ನಿಂತ, ಇನ್ನಷ್ಟು ದೊಡ್ಡ ವ್ಯಾಪ್ತಿಯ 'ಆತ'ನೇ ಆಗುತ್ತಾನೆ. ಒಟ್ಟಾಭಿಪ್ರಾಯದಲ್ಲಿ ಆ ಕವಿಯ ಕಾವ್ಯ ಎಂದರೆ ಆ 'ಕವಿಯ ಕಾವ್ಯ' ಮಾತ್ರವೇ ಆಗಿ ಉಳಿಯುವದು ಸಾಹಿತ್ಯದ ಒಂದು ಕ್ರಮ. ಹೀಗಾಗಿ ಆ ಕವಿ ಆ 'ಕವಿಯೇ' ಆಗಿ ಇತಿಹಾಸದಲ್ಲಿ ತನ್ನದೇ ಆದ ಒಂದು ಸ್ಥಾನವನ್ನು ಪಡೆದುಕೊಳ್ಳುತ್ತಾನೆ.

ಈ ಹಿನ್ನೆಲೆಯಲ್ಲಿ ಗಮನಿಸಿದರೆ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಈಗಾಗಲೇ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡ ಇಬ್ಬರು ಕವಿಗಳು ನನ್ನೆದುರಿಗಿದ್ದಾರೆ. ಚೆನ್ನವೀರ ಕಣವಿ ಮತ್ತು ಜಿ. ಎಸ್. ಶಿವರುದ್ರಪ್ಪ. ಸಂದರ್ಭ : ಇಬ್ಬರೂ ಕವಿಗಳ 'ಕಾವ್ಯವಸ್ತುವಿನ ಸ್ವರೂಪ' ವನ್ನು ಕುರಿತಾದ ಒಂದು ತೌಲನಿಕ ಅಧ್ಯಯನ.

ಈ 'ತೌಲನಿಕ ಅಧ್ಯಯನ' ಎಂಬ ಕಾರಣವೇ ಪ್ರಸ್ತುತ ಇಡಿಯ ಬರಹಕ್ಕೆ ಒಂದು ತೀರ ಸೀಮಿತವಾದ ನಿಲುವನ್ನು ತಂದು ಬಿಡಬಹುದು ಎಂಬ ಭಯ ನನಗಿದೆ. ಅಷ್ಟೇ ಏಕೆ, ಈ ಬರಹದ ಕೆಲವಾದರೂ ಅನಿಸಿಕೆಗಳಿಂದ ಇಬ್ಬರೂ ಕವಿಗಳ 'ಕಾವ್ಯ ವ್ಯಕ್ತಿತ್ವಕ್ಕೆ' ಕೊಂಚವಾದರೂ ಊನ ತಗಲಿಬಿಡುವ ಹೆದರಿಕೆಯೂ ನನಗಿದೆ. ಏಕೆಂದರೆ ( ಈಗಾಗಲೇ ಮೊದಲ ಪ್ಯಾರಾದಲ್ಲಿ ಸ್ಪಷ್ಟಪಡಿಸಿದಂತೆ ) ತಮ್ಮ ಅಸಾಧಾರಣ 'ಅಭಿವ್ಯಕ್ತಿ'ಗಳಿಂದ ತಮ್ಮದೇ ಆದ ವಿಶಿಷ್ಟ ಎತ್ತರಗಳಲ್ಲಿ ವಿರಾಜಮಾನರಾಗಿರುವ ಇಬ್ಬರನ್ನು ನನ್ನ (ತೀರ ಸೀಮಿತ) ಎತ್ತರಗಳಿಗೆ ಸರಿದೊರೆಯಾಗಿ ತಂದು ನಿಲ್ಲಿಸಿ, ಇಬ್ಬರನ್ನು ಒಂದೇ ಮಾಪನಗಳಿಂದ ಅಳೆದು, ಕೆಲವು ತೀರ್ಮಾನಗಳಿಗೆ ಬರುವದು ಅನೇಕ ದೃಷ್ಟಿಗಳಿಂದ ಅಪಾಯಕರ ಅನಪೇಕ್ಷಿತ ಕಾರ್ಯ. ವಸ್ತುಸ್ಥಿತಿ ಹೀಗಿದ್ದರೂ ಸನ್ನಿವೇಶದ ಒಂದು ಕೇಳಿಕೆಗನುಗುಣವಾಗಿ ನಾನು ಈ ತೌಲನಿಕ ಅಧ್ಯಯನಗೈಯುವ ಮೊದಲು ಈ ಇಬ್ಬರೂ ಕವಿಗಳ 'ಕಾವ್ಯಸ್ವರೂಪ'ದಲ್ಲಿಯ ಬಹುರೂಪಗಳನ್ನು, ಬಹುರೂಪಗಳಲ್ಲಿಯ ಭಿನ್ನತೆಗಳನ್ನು, ಭಿನ್ನತೆಗಳಲ್ಲಿಯ ಪ್ರತ್ಯೇಕ ವೈಶಿಷ್ಟ್ಯಗಳನ್ನು, ಇವುಗಳ ಹಿಂದಿರಬಹುದಾದ 'ಸಮಕಾಲೀನತೆ' ಮತ್ತು 'ಸಾರ್ವಕಾಲಿಕತೆ'ಗಳ ವಿಭಿನ್ನ ವೈಶಾಲ್ಯಗಳನ್ನು, ಅವುಗಳ ಉನ್ನತವಾದ ಸ್ವತಂತ್ರ ಅಸ್ತಿತ್ವಗಳನ್ನು ಪೂರ್ತಿಯಾಗಿ ಒಪ್ಪಿಕೊಳ್ಳುತ್ತೇನೆ. ಅದಕ್ಕೂ ಮುಖ್ಯವಾಗಿ ನನ್ನ ಒಂದು 'ಸಾಮಾನ್ಯ'ವಾದ 'ತೌಲನಿಕ' ಎಂಬ ದೃಷ್ಟಿಕೋನದಿಂದಾಗಿ ಅವರ ಕಾವ್ಯದಲ್ಲಿರಬಹುದಾದ 'ಆಶಯ'ಗಳಿಗೆ ನಾನು ಅಗತ್ಯಕ್ಕಿಂತ ಹೆಚ್ಚಿನ ಒತ್ತನ್ನೀಯುವುದು ಇಲ್ಲವೆ ಗೌಣಗೊಳಿಸಿ ತೇಲಿಸುವುದು ಸಾಧ್ಯ ಎಂಬ ಮಾತನ್ನು ಸ್ಪಷ್ಟಪಡಿಸುತ್ತೇನೆ.

ಈ ಎಲ್ಲ ಹಿನ್ನೆಲೆಗಳಲ್ಲಿ ಈ 'ತುಲನಾತ್ಮಕ' ವಿವೇಚನೆ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು, ಇಬ್ಬರೂ ಕವಿಗಳಲ್ಲಿಯ 'ವಸ್ತುಸಾದೃಶ್ಯ' ಕೆಲವನ್ನು ಎತ್ತಿಕೊಳ್ಳುತ್ತ ನನ್ನ ಅನಿಸಿಕೆಗಳನ್ನು ಮಂಡಿಸುತ್ತೇನೆ.

೨

ಪ್ರತಿಯೊಬ್ಬ ಮುಖ್ಯಕವಿ ಬದುಕಿನ ಮೂಲಭೂತ ಜೀವದ್ರವ್ಯದ ಬಗ್ಗೆ, ಅದರ ಅನಿವಾರ್ಯ ಘಟಕಗಳ ಬಗ್ಗೆ, ಅದನ್ನು ನಿರ್ಮಿಸುವ, ನಿರ್ದೇಶಿಸುವ ನಿರ್ವಹಿಸುವ ಚಲನೆಗೆ ತೊಡಗಿಸುವ ಚೇತನಗಳ ಬಗ್ಗೆ ಚಿಂತಿಸಿಯೇ ಇರುತ್ತಾನೆ. ಬದುಕಿನ ಆಗು–ಹೋಗು, ಏಳು–ಬೀಳು, ಆರೋಹಣ–ಅವರೋಹಣ, ಸುಖ–ದುಃಖ, ನೋವು–ನಲಿವು, ಆಶೆ–ನಿರಾಶೆ, ಪ್ರೇಮ–ದ್ವೇಷ, ಚಿಂತೆ–ಚಿಂತನೆ, ನೂರು

ಭಾವನೆ, ನೂರು ಕಾಮನೆಗಳನ್ನು ಸುತ್ತುಹಾಕಿಕೊಂಡಿರುತ್ತಾನೆ. ಇವೆಲ್ಲವುಗಳ ಮೇಲೆ ನೀಲಿ ಆಕಾಶವಂತೆ ಇನ್ನಷ್ಟು ದೊಡ್ಡದಾದ ಬದುಕು ಹರಡಿರುತ್ತದೆ. ಇವುಗಳಲ್ಲಿ ಯಾವುದಲ್ಲ ಕವಿಯ ಕಾವ್ಯಕ್ಕೆ ಗ್ರಾಸ ?

ಒಂದು ಸಾಮುದಾಯಿಕ ಬದುಕಿನಲ್ಲಿ ಪಾರಸ್ಪರಿಕ ಕೊಡುಕೊಳ್ಳುವಿಕೆಗಳು ಇದ್ದೇ ಇರುತ್ತವೆ. ಕೊಡುವ ಮತ್ತು ಇಸಿದುಕೊಳ್ಳುವ ಸ್ಥಾನಗಳ ಸಂಬಂಧ, ಅಂತಸ್ತು ಭಿನ್ನವಾಗಿರಬಹುದು. ಕೊಡುಕೊಳ್ಳುವಿಕೆಯ ರೀತಿಯೂ ಬೇರೆ ಬೇರೆಯಾಗಿರಬಹುದು. ಗುರು–ಶಿಷ್ಯರಾಗಿ, ಗಂಡ–ಹೆಂಡಿರಾಗಿ, ಪ್ರೇಮಿ–ಪ್ರಿಯಕರರಾಗಿ, ತಂದೆ-ಮಕ್ಕಳಾಗಿ, ಗೆಳೆಯ–ಗೆಳೆಯರಾಗಿ, ಸಹಪ್ರಜೆಗಳಾಗಿ, ಆರಾಧ್ಯವ್ಯಕ್ತಿಯಾಗಿ, ಅದಮ್ಯಶಕ್ತಿಯಾಗಿ ರೂಪಗಳು ನೂರು ವಿಧ. ಬಾಂಧವ್ಯಗಳು, ಸಾಹಚರ್ಯಗಳು, ಸಂಯಮದ ರೀತಿಗಳು ಸಾವಿರಾರು ತರಹ. ಅಂತೆಯೇ ಇದಕ್ಕೆ ಸಂಬಂಧಿಸಿದಂತಹ ಕವಿಯ ಅಭಿವ್ಯಕ್ತಿಯ 'ವ್ಯಕ್ತಿಚಿತ್ರಣ'ಗಳ ಭಾವಪಾರ್ಶ್ವಗಳೂ ಅಷ್ಟೇ ವೈವಿಧ್ಯಮಯ.

ಆತ್ಮೀಯತೆ, ಅನ್ಯೋನ್ಯತೆ, ಗೌರವ, ಅಭಿಮಾನ, ಕೃತಜ್ಞತೆ, ಸ್ನೇಹ ಕಾಣಿಕೆ, ಪ್ರೇಮಪೂರ, ಸಾಂಸ್ಕೃತಿಕ ದೇಣಿಗೆ, ಸಾಮಾಜಿಕ ಋಣಸಂದಾಯ, ಮರುಕದ ಲೇಪನ, ಕರುಣೆಯ ಕುರುಹು, ಅರ್ಪಣಾತ್ಮಕ ಅಭಿಮಾನ, ಬೆರಗಿನ ಅದ್ಭುತ ಒಂದೇ ಎರಡೇ, ಒಬ್ಬ 'ವ್ಯಕ್ತಿ'ಯನ್ನು ಕುರಿತಾದ ಒಬ್ಬ ಕವಿಯ ಅಭಿವ್ಯಕ್ತಿಯ ಭಾವಪಾರ್ಶ್ವಗಳು ಹೀಗೆ ಇರಬಹುದು ಎಂಬುದನ್ನು ಅರಿಯುವದು ಅವನ ಅಧ್ಯಯನದಿಂದ ಮಾತ್ರ ಸಾಧ್ಯ.

ಇಲ್ಲಿ ಪ್ರಸ್ತುತ ಇಬ್ಬರು ಕವಿಗಳ ಎರಡು ಪದ್ಯಗಳ ಕೆಲ ಸಾಲುಗಳನ್ನು ಗಮನಿಸೋಣ.

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
ತುಂಬಿ ತಲೆಯಾಡಿಸುತ, ಯಾವುದೋ ಒಳ ದನಿಗೆ
ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ
ಬೀಸುಗಾಳಿಯ ಜೊತೆಗೆ ಬಂದರದೋ ಬೇಂದ್ರೆ ! ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟ : ಅರಗಳಿಗೆ
ಹೊರ ಒಳಗೆ ತುಂಬಿ ತುಳುಕುವ ಬೆಡಗು. ಕಡಲ ಗುಟು-
ಕರಿಸಿ ಚಿಕ್ಕೆಗಳ ಮುಕ್ಕಳಿಸುವರು : ತಟ್ಟನೇ ಒಗಟು
ಒಡೆಯುವ ಒಡಪು–ನುಡಿ ಕುಡಿ ಮಿಂಚು ಬಾನ ಗುಡಿಗೆ.

ಇಪ್ಪತ್ತೊ ? ಎಪ್ಪತ್ತೋ ? ಮುಪ್ಪತ್ತು ಮುಂದೆ ನಡೆ;
ಅಂಬಿಕಾತನಯನಿಗೆ ದತ್ತು ಕೊಟ್ಟಂದು ಇವ-
ರೊಪ್ಪತ್ತು ; ಜಗದಂಬೆ ಹಡಲಿಗೆ ಹೊತ್ತು ಕುಣಿವ
ಗೆಲ್ಲಿ ಪುರಸೊತ್ತು ? ಹಣ್ಣಾದ ಕೇದಿಗೆಯು ಹೊಡೆ,
ಚೂಪಾದ ಗರಿ ; ಹುಷಾರಿ: ಕಂಪಿಗೆಯಲ್ಲಿ ಕೊರತೆ ?
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

[ ಚೆನ್ನವೀರ ಕಣವಿ : 'ಎಪ್ಪತ್ತರ ಬೇಂದ್ರೆ' ]

ನೋಡಿದರೆ ನೋಡಿದಷ್ಟೂ ಇಷ್ಟ
ಮಾತೊ ಮಿತ, ಖಚಿತ, ನಿಷ್ಕೃಷ್ಟ.
ಅಚ್ಚು ಕಟ್ಟಿನ ಸ್ವಚ್ಛತೆಯ ಸಂಕೇತ
ಮೂಡಿದೊಂದೊಂದು ಕೃತಿಯೂ ಕೃತಾರ್ಥ.
ಪರಿಪೂರ್ಣತೆಯ ಅತೃಪ್ತ ಅನ್ವೇಷಕ
ಪ್ರತಿಭೆ ಪಾಂಡಿತ್ಯಗಳ ಹದವಾದ ಪಾಕ.
ಸಂಶಯದ ಕಡಲಲ್ಲಿ ಗೋಪುರದ ದೀಪ
ಸದ್ವಿರದ ಸಾಧನೆಗೆ ಜೀವಂತ ರೂಪ.
ಇನ್ನಾರು ಬೆಳೆದಾರು ನಿಮ್ಮ ಎತ್ತರಕೆ ?
ಕನಡದ ಕೊರಳಲ್ಲಿ ಶ್ರೀಕಂಠಿಕೆ.

[ ಜಿ. ಎಸ್. ಎಸ್. : 'ತೀ. ನಂ. ಶ್ರೀ' ]

ಈ ಎರಡೂ ಕವಿತೆಗಳ ಕೊನೆಯ ಸಾಲುಗಳಲ್ಲಿಯ ಒಂದು ವಿಶಿಷ್ಟ ಸಾಮ್ಯವನ್ನು ಗಮನಿಸಬೇಕು.

ಒಬ್ಬರು ಹೇಳುತ್ತಾರೆ :
'ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ'.
ಇನ್ನೊಬ್ಬರು ಹೇಳುತ್ತಾರೆ :
'ಇನ್ನಾರು ಬೆಳೆದಾರು ನಿಮ್ಮ ಎತ್ತರಕೆ ?
ಕನ್ನಡದ ಕೊರಳಲ್ಲಿ ಶ್ರೀಕಂಠಿಕೆ.'

ಈ ಸಾಲುಗಳನ್ನು ಓದಿದಾಗ ಒಡಮೂಡುವ ಒಂದು ಮಾತು ಮಾತ್ರ ಸ್ಪಷ್ಟವಾಗುತ್ತದೆ. ಈ ಇಬ್ಬರೂ ಕವಿಗಳಿಗೆ ತಾವು ಎತ್ತಿಕೊಂಡ 'ವ್ಯಕ್ತಿ'ಗಳ ಬಗ್ಗೆ

ಅವರ ಸಾಧನೆಗಳ ಬಗ್ಗೆ ತುಂಬ ಉನ್ನತವಾದ, ತುಂಬ ಗೌರವಪೂರ್ಣವಾದ ಭಾವ ಏದೆ ಎಂದು.

ಹೇಗೆ ಬೇಂದ್ರೆ ನಡೆವದ್ದೆಲ್ಲವೂ ಸಾಧನಕೇರಿಯಾಗದೋ ಹಾಗೆಯೇ ಅವರು ನುಡಿದದ್ದೆಲ್ಲವೂ ಕವಿತೆಯಾಗದು ಎಂದು ಎಲ್ಲರಿಗೂ ಗೊತ್ತು. ಹಾಗೆಯೇ 'ಇನ್ನಾರು ಬೆಳೆದಾರು ನಿನ್ನ ಎತ್ತರಕೆ' ಎಂದು ಎಷ್ಟೇ ತುಂಬುಗಂಟಲಲ್ಲಿ ಕವಿ ಕೇಳಿದರೂ ತೀ. ನಂ. ಶ್ರೀ. ಅವರಿಗಿಂತ ಎತ್ತರಕ್ಕೆ ಬೆಳೆದವರು ನಮ್ಮ ಮಧ್ಯದಲ್ಲಿ ಇದ್ದೇ ಇದ್ದಾರೆ ಎಂದೂ ನಮಗೆ ಗೊತ್ತು. ಅಷ್ಟೇ ಏಕೆ, ತಮ್ಮ 'ಲಹರಿ'ಗಳ ಚೌಕಟ್ಟಿನಿಂದ ಹೊರಬಿದ್ದ ಪ್ರಸ್ತುತ ಇಬ್ಬರೂ ಕವಿಗಳಿಗೂ ಈ ಎರಡೂ ಅಂಶಗಳು ಗೊತ್ತು. ಆದರೆ ಈ ಅಂಶಗಳು ಈ ಕವಿತೆಗಳ ಸಂದರ್ಭದಲ್ಲಿ ಅಷ್ಟು ಮಟ್ಟಿಗೆ ಕಟ್ಟಿಗೆ ಹಚ್ಚಬೇಕಾದ ಅಂಶಗಳಾಗಿರದೆ ಪ್ರಸ್ತುತ ಕವಿಗಳಿಗೆ ಸಂಬಂಧಿಸಿದ ಒಂದು 'ವೈಶಿಷ್ಟ್ಯ'ದ ಮೇಲೆ ಬೆಳಕು ಹಿಡಿಯುವ ಅಂಶಗಳಾಗಿವೆ ಎಂದೇ ನನ್ನ ಅನಿಸಿಕೆ. ಅದು ಸಂಬಂಧಿಸಿದ ಆಯಾ ವ್ಯಕ್ತಿಗಳ 'ಸಾಧನೆ' ಗಳನ್ನು ಕುರಿತಾಗಿ ; 'ಇಸಿದು ಕೊಳ್ಳುವ' ಯಾವುದೇ ತುಂಬುಹೃದಯದ 'ವ್ಯಕ್ತಿ' ಅಷ್ಟೇ ತುಂಬುಗೊರಳಲ್ಲಿ ಮರು ಅರ್ಪಿಸುವ ಕೃತಜ್ಞತೆಯ ಆರ್ದ್ರತೆ ಮಾತ್ರವಾಗಿ ಇಲ್ಲಿ ಒಡಮೂಡಿರುತ್ತದೆ. ಇದು ಎಷ್ಟು ಮಟ್ಟಿಗೆ ಈ ಕವಿಗಳದ್ದೋ ಅಷ್ಟೇ ಮಟ್ಟಿಗೆ ಈ ನೆಲದ ನಾಡು, ನುಡಿಗಳ ಮೂಲಭೂತ ಜೀವದ್ರವ್ಯದ ಸಾಂಸ್ಕೃತಿಕ ಸಜ್ಜನಿಕೆಯ ದ್ಯೋತಕವೂ ಹೌದು. ಬಹುಶಃ ಈ ಸಾಂಸ್ಕೃತಿಕ ಗಟ್ಟಿ ತಳಪಾಯವೇ ಈ ಇಬ್ಬರು ಕವಿಗಳ ತೌಲನಿಕ ಅಧ್ಯಯನಕ್ಕೆ ಒಂದು ಮುಖ್ಯ ತಳಪಾಯವಾಗಬಹುದು ಎಂದು ನಾನು ಭಾವಿಸುತ್ತೇನೆ.

ಈ ಅಂಶವನ್ನು ಒತ್ತಿಹೇಳುವ ಉದ್ದೇಶವಿಷ್ಟೇ : ಹೀಗೆ 'ಇಸಿದು' ಕೊಂಡಿದ್ದಕ್ಕೆ 'ಕೃತಜ್ಞತೆ' ಸೂಚಿಸುವ 'ಸಾಂಸ್ಕೃತಿಕ ಮನೋಧರ್ಮ' ಮಾತ್ರವೇ ನಮ್ಮ ಪೈಶಾಚಿಕತೆಗಳ ಬಗ್ಗೆ ಸಾತ್ವಿಕ ಕೋಪ ತಾಳುವ, ಅದಕ್ಕೆ ದಿಟ್ಟ 'ಅಭಿವ್ಯಕ್ತಿ'ಯನ್ನೀವ ನೈತಿಕ ತಾಕತ್ತನ್ನು ಪಡೆಯಬಲ್ಲದು ಎಂದು ಹೇಳುವದಕ್ಕೆ ಈ ಪೀಠಿಕೆ ಒಂದು ಪಾರ್ಶ್ವ. ಈಗ ಇನ್ನೊಂದು ಪಾರ್ಶ್ವದತ್ತ ಬೆಳಕು ಹಿಡಿಯಲು ಇಬ್ಬರ ಕೆಲ ಸಾಲುಗಳನ್ನು ನೋಡೋಣ.

ಯಾರು ಹೇಳಿದರು ನಾವೆಲ್ಲ ನಿನ್ನ ಮರೆತೆವೆಂದು ?
ಹಗಲೆಲ್ಲ ಕಟಿ ಕಟಿ ಬೇಡವೆಂದು
ಕಟಿದು ನಿಲ್ಲಿಸಿದ್ದೇವೆ

ಕೊಟು ಕೊಟಿನಲಿ ನಿನ್ನ ನಗುವ ಮೂರ್ತಿ,
ಕಂಡು ಕಾಣದ ಹಾಗೆ ದಾಟಿ ಹೋಗುತ್ತೇವೆ-
ಮರುಗುವದು ಒಳಗೊಳಗೆ
ಪಾರದರ್ಶಕದಂಥ ನಿನ್ನ ಅಂತಃಕರಣ :
ಕಾಡಿಗೆ ಬಳಿದ ಕಾಜಿನಲಿ ಮಾತ್ರ ಕಾಣುವದು
ನಮಗೀಗ ಹಿಡಿದ ಗ್ರಹಣ.

[ ಚೆನ್ನವೀರ ಕಣವಿ : 'ಗಾಂಧಿ' ]

ನೀನಿದ್ದೆ ಎಂಬುದಕ್ಕೆ
ಸ್ಮಾರಕ ನಿರ್ಮಿಸುವದನ್ನು
ನಾವು ಮರೆತಿಲ್ಲ.
ಇಗೋ, ಈ ಚೌಕದಲ್ಲಿ, ಆ ಮಹಲಿನಲ್ಲಿ
ಈ ಪಾರ್ಕಿನಲ್ಲಿ
ನಿನ್ನ ವಿಗ್ರಹವನ್ನು ಸ್ಥಾಪಿಸಿ
ವರ್ಷ ವರ್ಷವೂ
ನಿನ್ನ ನೆನಪುಗಳಲ್ಲಿ
ಕೈ ತೊಳೆದುಕೊಳ್ಳುತ್ತಿದ್ದೇವೆ.
ಆದರೂ,
ಕೈಗಂಟಿಕೊಂಡಿರುವ
ನಿನ್ನ ರಕ್ತದ ಗುರುತು
ಇನ್ನೂ ಹೋಗುತ್ತಿಲ್ಲ.

[ ಜಿ. ಎಸ್. ಎಸ್. : 'ಗಾಂಧಿ' ]

ಈ ಸಾಲುಗಳಲ್ಲಿಯ 'ಸಮುದಾಯಪರ' ಸ್ವವಿಮರ್ಶಕ ಸ್ಪಷ್ಟತೆಯ 'ಸಾಮಾನ್ಯತೆ'ಯನ್ನು ಗುರುತಿಸಬೇಕು. ಮಹಾತ್ಮನಿಗೆ 'ಕೃತಜ್ಞತೆ' ಯನ್ನು ಸೂಚಿಸುವ 'ಕರ್ತವನಿಷ್ಠ' ಮನಗಳ 'ಅಗಾಧ ಸೇವೆ' ಗಳನ್ನು ಕುರಿತಾಗಿ ಒಂದು ನಿವೇದನೆಯ ರೂಪದಲ್ಲಿ ಆರಂಭವಾಗುವ ಈ ಸಾಲುಗಳು ಸೂಚಿಸುವ ವಿಡಂಬನೆ ಕೊನೆಯ ಸಾಲುಗಳಿಗೆ ಬರುವಾಗ ತಾಳುವ ಅಗಾಧ 'ನೋವಿನ' ಸಾಮಾನ್ಯತೆಯೂ ಇಲ್ಲಿ ಗಮನಾರ್ಹ. ಮೊದಲ ಪದ್ಯದ ಕೊನೆಯ ಸಾಲುಗಳು 'ರಾಹು' ಗ್ರಸ್ತವಾದ

ನಮ್ಮ ರಾಕ್ಷಸೀ ರೂಪದತ್ತ ಬೆರಳು ತೋರಿಸಿದರೆ, ಇನ್ನೊಂದು, ಅದಕ್ಕಿಂತ ಹೆಚ್ಚು ಸ್ಪಷ್ಟವಾಗಿ, ಅಂಥ ರಾಕ್ಷಸತನ ಮಾತ್ರವೇ ಗೈಯಬಹುದಾದ [ಗೈದಿರಬಹುದಾದ] 'ರಕ್ತ ಪಾತ'ವನ್ನು ನೇರವಾಗಿ ಸೂಚಿಸುತ್ತದೆ. ಎಂದರೆ, ಒಬ್ಬ ಮಹಾನ್ ವ್ಯಕ್ತಿಯ ಚಿತ್ರಗಾರ ಪಾರ್ಶ್ವದಲ್ಲಿಯೇ, ಚಿಂತನೆಯನ್ನು ನೆಮ್ಮಿಕೊಳ್ಳುವ ಸಾಮಾಜಿಕ 'ಆತ್ಮ' ವಿಮರ್ಶಕ ಗುಣದ ನಿಷ್ಠುರತೆಯನ್ನು ಇಬ್ಬರಲ್ಲಿಯೂ ಒಂದೇ ಬಗೆಯ ಧ್ವನಿಯಲ್ಲಿ ಸಾಮಾನ್ಯವಾಗಿ ಕಾಣುವದು, ಕೇವಲ ಕಾಕತಾಳೀಯವೆನಿಸದೆ, ಒಂದು 'ನಿಸ್ಪೃಹ' ಮನೋಭಾವ ಮಾತ್ರವೇ ಪ್ರಕಟಿಸಬಹುದಾದ ಪ್ರಾಮಾಣಿಕ ವಿಶ್ಲೇಷಣೆ ಎನಿಸುತ್ತದೆ.

೩

ಒಂದು ಸಮಾಜದ ಆರೋಗ್ಯ, ನಮ್ಮನ್ನು ಪ್ರೀತಿಯಿಂದ, ಕೃತಜ್ಞತೆಯಿಂದ, ಮೆಚ್ಚುಗೆಯಿಂದ ಅರಳಿಸುವಂತೆ ಅದರ 'ಅನಾರೋಗ್ಯ' ನಮ್ಮನ್ನು ಕುಗ್ಗಿಸುತ್ತದೆ, ಕೆರಳಿಸುತ್ತದೆ, ಮತ್ತೆ ಮತ್ತೆ ಅದರತ್ತ ಹೊರ ಹೊರಳಿ ತಿವಿಯುವಂತೆ ಮಾಡುತ್ತದೆ. ಕವಿ ಕೂಡ ಈ ಪ್ರಕ್ರಿಯೆಗೆ ಹೊರತಾಗಿಲ್ಲ. ಒಂದಲ್ಲ ಒಂದು ಹಂತದಲ್ಲಿ ಪ್ರತಿಯೊಬ್ಬ ಕವಿಯ ಅಭಿವ್ಯಕ್ತಿಗಳಲ್ಲೂ ಈ ಬಗೆಯ ಸಾಮಾಜಿಕ ಅನಾರೋಗ್ಯದ ಬಗ್ಗೆ ಪ್ರಸ್ತಾಪ ಮೂಡಿ ಬಂದೇ ಇದೆ–ಹಾಸ್ಯವಾಗಿ, ವಿಡಂಬನೆಯಾಗಿ, ಕಟಕಿಯಾಗಿ. ಕಳಕಳಿಯಾಗಿ, ನೋವಾಗಿ, ಚಿಂತನೆಯಾಗಿ, ವಿವೇಚನೆಯಾಗಿ, ಚಿಕಿತ್ಸಕತೆಯಾಗಿ ಈ ಹಿನ್ನೆಲೆಯಲ್ಲಿ ಪ್ರಸ್ತುತ ಕವಿಗಳಿಬ್ಬರೂ ಬರೆದ ಎರಡು ಕವನಗಳ ಕೆಳಗಿನ ಸಾಲುಗಳನ್ನು ನೋಡ ಬಹುದು :

ಮೊದಲ ನೋಟಕ್ಕಿವನು ಹಸುಳೆ, ಪೂರಾ ಹಸುಳೆ
ಗುಮ್ಮನಗುಸುಗ,
ಭಾವ ಕೋಶದ ಮೇಲು ಮುಸುಗನೆಳೆದರೆ ಸಾಕು
ಮೂಗು ಮುಚ್ಚದೆ ಬೇರೆ ಗತಿಯೆ ಇಲ್ಲ.
ಒಳ ಮುಚುಗ, ನಾಲಿಗೆಯು ಹೊರಗೆ ಹಾದರೆ ಚುಚುಗ
ತಿಂದುಚುಗ,
ಬೆಳಕಿಂಡಿಯಲ್ಲಿಳಿದು ಬಂದು ಬೆಣ್ಣೆಯ ತಿಂದು
ಗುರ್ರೆನುವ ಬಾವುಗ;
ಗೋಣಿ ಚೀಲದಿ ಹಾಕಿ ಹೊತ್ತು ಹೊರಗೊಗೆದರೂ
ಮತ್ತೆ ಹೇಗೋ ಬಂದು ಮೂಸುವದು ಸೋಜಿಗ.

ಅಲ್ಲಲ್ಲಿ ಸಂಶಯದಿ ಏಕೆ ಹುಡುಕುತ್ತೀರಿ ?
ಇಲ್ಲಿಯೇ, ಇವನಂತರಂಗದಲ್ಲಿಯೇ ಹೊಗೆಯಾಡುತಿದೆ
ಬನ್ನಿ, ಮೂರನೆಯ ಮಹಾಯುದ್ಧ.

[ ಚೆನ್ನವೀರ ಕಣವಿ : 'ಅಪರಾವತಾರ' ]

ಮೊದ ಮೊದಲು
ನಯವಾದ ಜೇಡನ ಜಾಲ,
ಅನಂತರ
ರೇಶಿಮೆಯ ನೂಲಿನ ಕುಣಿಕೆ;
ಬರಬರುತ್ತಾ ಬೆಸ್ತ ಬಲೆ;
ಗಾಳಿ ಬೀಸುವ ಗತ್ತು
ನನ್ನ ಸುತ್ತೂ.
ನೀನೇ ಭೂಪತಿ ಎಂದು ಉಬ್ಬಿಸಿ
ಸುತ್ತ ಮೆತ್ತಗೆ
ಸೌದೆಯನ್ನೊಟ್ಟುತ್ತಾರೆ
ಯಾವಾಗ ಕಡ್ಡಿ ಗೀಚುತ್ತಾರೋ ಏನೋ.

[ ಜಿ. ಎಸ್. ಎಸ್. : 'ನನ್ನ ಸುತ್ತು' ]

ಈ ಎರಡೂ ಕವಿತೆಗಳಲ್ಲಿಯ ವಿಚಾರಿಸುವ ಕ್ರಮ, ವಿವರಣೆಯ ಮೆಟ್ಟಲುಗಳು, ಒಡ ಮೂಡುವ ಧ್ವನಿ, ಅಭಿವ್ಯಕ್ತಿಯ ಒಟ್ಟು ಆಶಯ. ಇವುಗಳಲ್ಲಿಯ ವಿಚಿತ್ರ ಸಾಮ್ಯ ಬೆರಗುಗೊಳಿಸುವಂತಹದು. ಕವನಗಳ ಈ ಸಾಲುಗಳ ಆರಂಭ ಮತ್ತು ಕೊನೆಗಳಂತೂ ಒಂದು ಇನ್ನೊಂದರ ಕಾರ್ಬನ್ ಪ್ರತಿಗಳಂತಿವೆ. ಠಕ್ಕು ವಿನಯದ ವಿವರಣೆಯಿಂದ ಆರಂಭವಾಗುವ ವಿಶ್ಲೇಷಣೆ ವಿಧ್ವಂಸಕ ನಿಲುವಿನ ವಾಸ್ತವದ ಚಿತ್ರಣದೊಂದಿಗೆ ಮುಗಿಯುವದು ಈ ಇಬ್ಬರೂ ಕವಿಗಳ ಆಲೋಚನಾಧಾಟಿ ಸಾಮ್ಯತೆಯ ಪ್ರತೀಕಗಳಾಗಿವೆ.

೪

ಮನುಷ್ಯ ಮುಖ್ಯವಾಗಿ ಪ್ರಕೃತಿಯ ಕೂಸು. ಈತ ಪ್ರಕೃತಿಯಿಂದಲೇ ಜನಿತ, ಪ್ರಕೃತಿಯಿಂದಲೇ ಪೋಷಿತ. ಅನ್ನ ಸ್ವೀಕಾರ, ನೆಲ ಜಲಗಳ ಸ್ವೀಕಾರ, ಗಾಳಿ ಬೆಳಕುಗಳ ಸ್ವೀಕಾರ, ಅಷ್ಟೇ ಏಕೆ ಅಂತಿಮವಾದ ೩×೬ ನೆಲದ ದೇಣಿಗೆ ಕೂಡ ಪ್ರಕೃತಿಯಿಂದಲೇ ಈಯಲ್ಪಟ್ಟದ್ದು. ಹೀಗಾಗಿ ಪ್ರಕೃತಿಯನ್ನು ಹೊರತುಪಡಿಸಿ

ಮೂಲಭೂತ ಮನುಷ್ಯನಲ್ಲಿ ಏನೂ ಇಲ್ಲ ಎಂದೂ ಯಾವುದೂ. ಇದು ಪ್ರಕೃತಿ ಮತ್ತು ಬದುಕುಗಳ ಸಂಬಂಧ. ಇವೆರಡನ್ನು ಬೆಸೆಯುವ ಬೆಸುಗೆ ಕಾಲ. ಎಂತಲೇ ಪ್ರಕೃತಿ, ಕಾಲ ಮತ್ತು ಬದುಕು ಇವು ವ್ಯಕ್ತಿಯೊಬ್ಬನ ಬಾಳಿನುದ್ದಕ್ಕೂ ತಳುಕು ಹಾಕಿಕೊಂಡಿರುವ ತ್ರಿವೇಣಿಗಳು. ಇವುಗಳ ಸಂಬಂಧ ತ್ರಿ–ಕಾಲ. ಎಂತಲೇ ಇವು ಒಂದಾಗಿ, ಎರಡಾಗಿ, ಒಟ್ಟೊಟ್ಟಾಗಿ ಅನೇಕ ಮೆಟ್ಟಿಲುಗಳಲ್ಲಿ ಈ ಕವಿಗಳಲ್ಲಿ ಅಭಿವ್ಯಕ್ತ

ಎಲ್ಲಿ ಹೋದರೂ ಬೆನ್ನು ಹತ್ತಿಯೇ ತೀರುವದು
ಗೋಪುರದ ಕಣ್ಣು ಗಡಿಯಾರ–
ಮರೆತು ಕುಳಿತರೆ ತಲೆಯ ಕುಕ್ಕುವದು,
ನರೆತ ಕೂದಲು ಹಿಡಿದು ಒಂದೊಂದೆ ಎಣಿಸುವದು;
ಸುತ್ತು ಸುತ್ತಿಗೆ ಏನೊ ಕತ್ತರಿಸಿ ಒಗೆಯುವದು,
ವಿಶ್ವದಗಲವ ಸುತ್ತಿ ಬಿಚ್ಚುವದು, ಮತ್ತೆ
ಮುಚ್ಚುವದು ಸುರುಳಿ ಸುರುಳಿ.
ದೂರದಲಿ ಯಾರೋ ಮಬ್ಬುಗತ್ತಲಲಿ
ಹುಬ್ಬುಗೈ ಹಚ್ಚಿ ನೋಡುತ್ತಿದ್ದಾರೆ ಹೊರಳಿ ಹೊರಳಿ.
ಅಂತೂ ಕೊನೆಗೆ ಬಂತು ಮಳೆ
ಹುಚ್ಚು ಹೊಳೆ.

[ ಚೆನ್ನವೀರ ಕಣವಿ : ' ಅಂತೂ ಕೊನೆಗೆ ಬಂತು ಮಳೆ ' ]

ತುಂಬಿದೂರಿನ ನಡುವೆ ಗೋಪುರದ ಗಡಿಯಾರ,
ಕಾದ ಬಿಸಿಲಿನ ಎದೆಗೆ ಒಂದು ಗಂಟೆಯ ಬಡಿತ;
ಜಂತಿಯಲಿ ಗೂಡು ಕಟ್ಟಿದ ಜೇನು ಹಾರಿ ಹೋಗಿವೆ ಈಗ,
ತೂಗುತ್ತಲಿವೆ ಖಾಲಿ ಗೂಡು.
ಅಲ್ಲಲ್ಲಿ ಜೇಡ ಬಲೆಗಳ ಜಾಲ,
ಸುಣ್ಣ ಬಣ್ಣವ ಬಳಿದ ಗೋಡೆಯಲ್ಲೂ ಕೂಡ
ಸುಕ್ಕು, ತರಕಲು, ಬಿರುಕು.
ಛಾವಣಿಯ ಹಂಚು ಮಳೆ ಬಿಸಿಲು ಗಾಳಿಯಲಿ ಉದುರಿ
ಈಗೀಗ ಜಿನುಗುತಿದೆ ಮಾಗಿ ಮಂಜಿನ ಸೋನೆ.
... ... .... ...
ತೂಬನೆತ್ತಿದರೇನಂತೆ ಬಿಡು, ಆ ನೀರಗಂಟೆ
.... .... ... ....

ಮನೆಯಂಗಳದ ಮಬ್ಬು ಬೆಳಕಿನ ನಡುವೆ ತಡವರಿಸುತಿವೆ ಕಣ್ಣು
ಮಹಡಿ ಮೆಟ್ಟಿಲ ಮೇಲೆ ಯಾರ್‍ಯಾರದೋ ಹೆಜ್ಜೆ
... ... ... ....
ಯಾರೋ ಬಡಿಯುತ್ತಿದ್ದಾರೆ ಬಾಗಿಲ ಹೊರಗೆ
ಒಂದೇ ಸವನೆ —
ಏಳು, ಬಾಗಿಲನು ತೆಗೆ, ಹೆದರದಿರು ಕೊನೆಗೆ

[ ಜಿ. ಎಸ್. ಎಸ್. : ' ಮಬ್ಬಿನಿಂದ ಮಬ್ಬಿಗೆ ' ]

ಇಲ್ಲಿ ಕಾಲದ ಔನ್ನತ್ಯವನ್ನು ಸಾರುವದಕ್ಕೆ ಇಬ್ಬರೂ ಕವಿಗಳು 'ಗೋಪುರ' ದ ಪ್ರತಿಮೆಯನ್ನು ಬಳಸಿಕೊಂಡದ್ದು ಅರ್ಥಪೂರ್ಣ. ಕಾಲ 'ಸರ್ವಸಾಕ್ಷಿ' ಯಾಗಿರುವದಕ್ಕಂತಲೇ ಅದು 'ತುಂಬಿದೂರಿನ ನಡುವೆ' ಇದ್ದು 'ಎಲ್ಲಿ ಹೋದರೂ ಬೆನ್ನು ಹತ್ತಿಯೇ ತೀರು'ತ್ತದೆ. 'ಮರೆತು' ಕುಳಿತರೆ ತಲೆ ಕುಕ್ಕುತ್ತದೆ. 'ಒಂದು ಬಡಿತ' ದೊಂದಿಗೆ ನರೆತ ಕೂದಲು ಹಿಡಿದು, ಒಂದೊಂದೆ ಎಣಿಸಿದಂತೆ' 'ತೂಗುತ್ತವೆ ಖಾಲಿ ಗೂಡು'. 'ಸುತ್ತು ಸುತ್ತಿಗೆ ಏನೋ ಕತ್ತರಿಸಿ ಒಗೆದಂತೆ' 'ಸುಕ್ಕು, ತರಕಲು, ಬಿರುಕು' 'ಯಾರೋ ಮಬ್ಬು ಬೆಳಕಿನ ನಡುವೆ' 'ಮಬ್ಬು ಗತ್ತಲಲಿ' 'ಹುಬ್ಬುಗೈ ಹಚ್ಚಿ ನೋಡಿದಂತೆ' 'ತಡವರಿಸುತಿವೆ ಕಣ್ಣು'. ಮತ್ತೆ ಬರುತ್ತದೆ ಮಳೆ. ಮತ್ತೆ ಆರಂಭವಾಗುತ್ತದೆ ಕಾಲನ ಚಕ್ರ. ನಿಂತೇ ಇದೆ ಗೋಪುರ, 'ತುಂಬಿದೂರಿನ ನಡುವೆ' ಎಲ್ಲಿ ಹೋದರೂ ಬೆನ್ನು ಹತ್ತುತ್ತ. ಎದೆ ಇದ್ದವರು ಮತ್ತೆ ಮತ್ತೆ 'ಬಾಗಿಲು ತೆಗೆದು' ಬದುಕನ್ನು ಎದುರುಗೊಳ್ಳಬೇಕು, 'ಹೆದರದೆ'. ಇದು ಕಾಲನ ಕರೆ. ಕಾಲನ ಕರೆ ಎನ್ನುವದೇ ಒಂದು ನಿರಂತರ 'ಹರಿವ ನೀರು' 'ಹುಚ್ಚು ಹೊಳೆ'.

ಒಂದರೊಳಗೊಂದು ಹೆಣೆದಂತೆ ಸಾಗುವ ಇಲ್ಲಿಯ ಆಲೋಚನೆಯ ಮೆಟ್ಟಲುಗಳಿಗೆ ಹೆಚ್ಚಿನ ವಿವರಣೆ ಅನಾವಶ್ಯಕ. ಆದರೆ, ಇದಕ್ಕೂ ಒಂದು ಮುಂದಿನ ಮೆಟ್ಟಲಾಗಿ, ಬದುಕಿನ ಒಂದು ಯಂತ್ರ-ವಾಸ್ತವದ ಪ್ರತಿಮೆಯನ್ನು ಬಳಸಿ, ಕಾಲವನ್ನು ಅಳೆಯುವ ಇವರ ವಿಧಾನ ನನ್ನ ವಾದವನ್ನು ಇನ್ನೂ ಪುಷ್ಟೀಕರಿಸೀತು.

ಇದು ದೊಡ್ಡ ನಿಲ್ದಾಣ ಕೂಟ
ಇಲ್ಲಿಂದಲೇ ಹೊರಟು ಇಲ್ಲಿಗೇ ಬಂದು ಕೂಡುವವೆಲ್ಲ ಕಡೆಯ ಗಾಡಿ :
ದೇಹಾದ್ಯಂತ ಸಂಚರಿಸಿ ಪುಪ್ಪುಸಕೆ ಹರಿವಂತೆ ರಕ್ತನಾಡಿ.
ನಮ್ಮ ಗಾಡಿಗೆ ಏನು ಬಂತೋ ಧಾಡಿ

ನಿಂತು ನಿಂತಲ್ಲಿಯೇ ಗೊರಕೆ ಹೊಡೆಯುತ ಮಲಗಿಬಿಡುವ ರೂಢಿ.
... ... ... ...
ಇಡಿಯ ಹಾಡಿನಲಿ ಎದೆಯ ಮಿಡಿದಂತೆ ಯಾವುದೋ ಒಂದು ಚರಣ.
ಇರಲಿ ಹೊತ್ತಾಯ್ತು, ಮತ್ತೇಕೆ ಆ ಎಲ್ಲ ಹಳೆ ಪುರಾಣ ?
ಮತ್ತೆ ಎಲ್ಲಿಂದಲೊ ಬಂತು ತ್ರಾಣ
.... ... ... ....
ಎಲ್ಲಿರುವದೋ ಈ ಇದರ ಕೊನೆಯ ನಿಲ್ದಾಣ ?

[ ಚೆನ್ನವೀರ ಕಣವಿ : 'ಕೊನೆಯ ನಿಲ್ದಾಣ' ]

ಇದು ದೊಡ್ಡ ಜಂಕ್ಶನ್ನು
ಹತ್ತು ಕಡೆಯಿಂದ ಬಂದು ಹೋಗುವವಿಲ್ಲಿ
ನೂರು ನೆನಪಿನ ಕಂಬಿ.
ಆ ಮೂರನೆಯ ಕಂಬಿಯ ಮೇಲೆ
ಹೆಣಭಾರವಾಗಿ ಮಲಗಿದೆ
ಗೂಡ್ಸ್ ಗಾಡಿಯ ಸಾಲು-
ಬೆಳಕಿರದ, ಚಲನೆಯೇ ಇರದ,
ಮರೆಯಲೆತ್ನಿಸಿದರೂ ಹೊರೆಯಾಗಿ ಬಿದ್ದಿರುವ
ಅನಿವಾರ್ಯ ಭಾರದ ಹಾಗೆ.
.... ... ... ...
ರೈಲು ಬರುತ್ತದೆ : ಕವಿದ ಕತ್ತಲಿನಾಚೆ
ನಾಳೆ ಬೆಳಗಿನ ಕೆಳಗೆ
ಹೊಳೆವ ಊರಿನ ಕನಸು ತೆರೆಯುತ್ತದೆ.
ಏಳಯ್ಯ, ಓ ಮನುಷ್ಯ
ಇನ್ನು ಕೆಲವೇ ನಿಮಿಷ.

[ ಜಿ. ಎಸ್. ಎಸ್ ]

ಚಲನಶೀಲತೆಯ ಕೇಂದ್ರ ಬಿಂದುವನ್ನು (ಜಂಕ್ಶನ್ನು, ದೊಡ್ಡ ನಿಲ್ದಾಣ ಕೂಟ) ಬಳಸಿಕೊಂಡು, ಚಲನ ಹೀನತೆಯೇ ಸ್ಥಾಯಿ (ಮಲಗು / ಗೊರಕೆ ಹೊಡೆ) ಯಾಪಂಥ ಬದುಕಿನ ಒಂದು ಯಾಂತ್ರೀಕೃತ (ರೈಲು) ಸ್ಥಿತಿಯನ್ನು ಈ ಇಬ್ಬರೂ ಕವಿಗಳು ಪ್ರಯೋಗಿಸಿರುವ ರೀತಿ, 'ಅನನ್ಯ ಸಾಮಾನ್ಯ'. ಹಾಗಿದ್ದೂ ಕೊನೆಯಲ್ಲಿ

ಚಲನ ಶೀಲತೆಗೇ ಪ್ರಾಮುಖ್ಯವಿತ್ತ, ಇದು ಮಾತ್ರವೇ ಅನಿವಾರ್ಯ ಎಂದು ಸೂಚಿಸುವ ಇಬ್ಬರ 'ನಿಲುವು' ಗಳು ಆಯಾ ಕವಿಗಳ 'ಸಾಮಾನ್ಯ' ವೆನಿಸುವ 'ಅಸಾಮಾನ್ಯ' ಆರೋಗ್ಯಕರ ನಿಲುವುಗಳನ್ನು ಸೂಚಿಸುತ್ತವೆ. ಇನ್ನೂ ಕೊಂಚ 'ಪಯಣ' ಉಳಿದಿದೆ ಎಂಬ ಆಶಯ, ಎಂಥ 'ಚಲನ ಹೀನ ಸ್ಥಿತಿಯ ನಂತರವೂ 'ಬದುಕು' ಉಳಿದೇ ಇದೆ ಎಂಬ ಆಶಯದತ್ತ ಬೆಳಕು ಹಿಡಿಯುತ್ತದೆ. ಒಂದೆಡೆಗೆ, 'ಇನ್ನು ಕೆಲವೇ ನಿಮಿಷ' ಎಂಬ ಸ್ಪಷ್ಟತೆ ಇದ್ದರೆ ಇನ್ನೊಂದೆಡೆಗೆ 'ಎಲ್ಲಿಹುದೋ ಈ ಇದರ ಕೊನೆಯ ನಿಲ್ದಾಣ' ಎಂಬ ಪ್ರಶ್ನೆ ಇದ. ಆದರೆ ಈ ಪ್ರಶ್ನೆಯಷ್ಟೇ ಅಸ್ಪಷ್ಟ. 'ಕೆಲವೇ ನಿಮಿಷ' ಎಂಬ ಅವಧಿಯ ವ್ಯಾಪ್ತಿ. ಈ ಬದುಕಲ್ಲಿ. ಏಕೆಂದರೆ ಬದುಕಲ್ಲಿ ಬರುವ 'ಅವಧಿ'ಯ ಬಗೆಗಾಗಲೀ 'ಕೊನೆಯ ನಿಲ್ದಾಣದ' ಬಗೆಗಾಗಲೀ ಯಾವುದು ತಾನೇ ಎಷ್ಟು ಸ್ಪಷ್ಟ ?

ಇಷ್ಟೆಲ್ಲ ಸಾಮ್ಯ, ಸಾದೃಶ್ಯ, ಸಮಭಾವ, ಸಮತೂಕಗಳ ಕಾವ್ಯ ಸಮಗ್ರ ಗಮನಿಸಿದ ಮೇಲಾದರೂ, ನಾವು ಒಂದು ಪ್ರಶ್ನೆಗೆ ಉತ್ತರಿಸಲೇ ಬೇಕಾಗುತ್ತದೆ. ಇಷ್ಟೆಲ್ಲ ಸಾಮ್ಯಾದಿಗಳ ಆಚೆಯೂ, ಒಂದು ಖಚಿತವಾದ 'ಸ್ವಂತಿಕೆ' ಯನ್ನು ಈ ಕವಿಗಳು ಪಡೆದುಕೊಂಡಿದ್ದರೆ, ಆ ಸ್ವಂತಿಕೆಯ 'ಸ್ವರೂಪ' ಎಂತಹದು ಎಂಬುದನ್ನು ಸ್ಥೂಲವಾಗಿಯಾದರೂ ನಾವು ಪ್ರಸ್ತಾಪಿಸಲೇ ಬೇಕಾಗುತ್ತದೆ. ಎಂದರೆ ಕಣವಿ ಅವರನ್ನು ಕಣವಿ ಆಗಿಯೂ, ಜಿ. ಎಸ್. ಎಸ್. ಅವರನ್ನು ಜಿ. ಎಸ್. ಎಸ್. ಆಗಿಯೂ ಇರಿಸುವ ಗುಣಲಕ್ಷಣಗಳನ್ನು ನಾವು ಗುರುತಿಸಬೇಕಾಗುತ್ತದೆ. ಆ ಕೆಲಸವನ್ನು ಈ ಇಬ್ಬರು ಕವಿಗಳ ಕೆಳಗಿನ ಸಾಲುಗಳೇ ಸಮರ್ಥವಾಗಿ ವಿವರಿಸುತ್ತವೆಂದು ನಾನು ನಂಬಿದ್ದೇನೆ.

ನಮ್ಮಂತೆ ಬದುಕಿನ ಬಾವಿಯಾಳಕ್ಕಿಳಿದು
ಜೊಂಡು ಪಾಚಿಯ ಕಂಡು ಉಂಡವರೆಷ್ಟು ಮಂದಿ ?
ಆಕಾಶದಲ್ಲಿ ಮೇಲೆ ತೇಲುತ್ತಿರುವ ನೀನು
ನಮ್ಮ ಬಾವಿ ದಂಡೆಗೆ ಹಣಿಕಿ ಹಾಕಬೇಡ.
ಅನುಭವಕೆ ತೆಕ್ಕೆ ಬಡಿದು, ಗುದುಮುರಿಗೆ ಹಾಕಿ, ಕಚ್ಚಾಡಿ
ಕೆಸರು ರಾಡಿಯ ಹಿಡಿಸಿ, ತಳಕ್ಕಿಳಿದು
ಮೇಲೆ ಗುಳ್ಳೆಗಳ ಬಿಡುವದಿದ್ದರೆ ಮಾತ್ರ ಬಾ.
ನಮಗೆ ಬೇಕಿಲ್ಲವೋ ಆ ದೂರಲೋಕದ ಅತೀಂದ್ರಿಯ ದೃಶ್ಯ.
ನಮಗೆ ಹಿತ ಇಲ್ಲೇ ಈ ಬಾವಿಯ ತಲಸ್ಪರ್ಶ.
ಹೋಗು, ನಮ್ಮಂತೆ ಸದಾ ಅಸ್ವಸ್ಥನಾಗು

ಬೇನೆ ಇರದಿದ್ದರೂ ನರಳು,
(ಅದೇ ವಾಸ್ತವದ ಬಾಳು)
ಕೃಷ್ಣ ಪಕ್ಷದ ಕತ್ತಲಲಿ ಮುಳುಗು ತಲೆಕೆಳಗು.

[ ಚೆನ್ನವೀರ ಕಣವಿ : 'ವಿನೂತನ ಕವಿಯ ಕೈಫಿಯತ್ತು' ]

ಬಿಡಬೇಡ ಚರಿತ್ರೆಯನ್ನು ಪುರಾಣವಾಗುವದಕ್ಕೆ
ನಿನ್ನೆಲ್ಲವನ್ನು ಅರೆವ ಗಾಣವಾಗುವದಕ್ಕೆ
ಇರಲಿ ತಕ್ಕಷ್ಟು ಅಸ್ವಸ್ಥತೆ,
ನಿನ್ನ ಒಳ್ಳೆಯದಕ್ಕೆ.
ನಡೆವುದೆಲ್ಲವನ್ನು ಹಿಡಿದು
ಪ್ರಶ್ನೆ ಮಾಡುವದಕ್ಕೆ,
ಪ್ರಶ್ನೆ ಮಾಡುತ್ತಲೇ
ಚಲನೆ ನೀಡುವದಕ್ಕೆ.

ಯಥಾಸ್ಥಿತಿಯ ಕದಲಿಸದೆ
ಸ್ವಸ್ಥನಾಗಿದ್ದೆಯೋ
ಆವರಿಸುತ್ತದೆ ನಿನ್ನನ್ನು
ಪುರಾಣದ ಪಾಚಿ.
ಕೊಳಗೆ ನಾಲಗೆ ಚಾಚಿ.

[ಜಿ. ಎಸ್. ಎಸ್. : 'ಚರಿತ್ರೆ ಪುರಾಣ' ]

ನೇರವಾಗಿ, 'ಚರಿತ್ರೆ ಪುರಾಣ'ದಲ್ಲಿ ಕವಿ ನಿರೂಪಿಸಿದ ಆಶಯದ ಅರ್ಥವೇ, ಒಂದು ವಿಡಂಬನಾತ್ಮಕ 'ಕವಿ ಸಮಯ'ವಾಗಿ 'ವಿನೂತನ ಕವಿಯ ಕೈಫಿಯತ್ತಿ'ನಲ್ಲಿ ಒಡಮೂಡಿದೆ. 'ಪಾಚಿ'ಯಿಂದ ದೂರವಿರಲು ಸಾರುವ ಸಾರವೇ ಇನ್ನೊಂದರಲ್ಲಿ, 'ಪಾಚಿ'ಯ 'ವೈಭವೀಕರ'ಣದಲ್ಲಿ ಅಭಿವ್ಯಕ್ತವಾಗಿದೆ.

ಎರಡೂ ಕವಿತೆಗಳಲ್ಲಿ, ಮೂಲಭೂತವಾಗಿ ಹಬೆಯಾಡುವದು ಬದುಕಿನ ವಾಸ್ತವ ಪ್ರಜ್ಞೆಯೇ. ಅದರ 'ಅಭಿವ್ಯಕ್ತಿ'ಯ ರೂಪ, ಆಕಾರ ಭಿನ್ನವಾಗಿದ್ದರೂ ಆಶಯ ಭಿನ್ನವಾಗಲಾರದು. ಏಕೆಂದರೆ ವಾಸ್ತವ ಪ್ರಜ್ಞೆ ಒಂದು ಚರಿತ್ರೆಯ ಪ್ರಜ್ಞೆ, ಎಂದರೆ, ಅದು ಭೂತ, ವರ್ತಮಾನ ಮತ್ತು ಭವಿಷ್ಯತ್ತಿನ ಪ್ರಜ್ಞೆ. ಆ

ಮುಖೇನ, ಇಂದನ್ನು ವಿಶ್ಲೇಷಿಸುವ ಪ್ರಜ್ಞೆ. ಆದರೆ ಈ 'ಇಂದು' 'ಇಂದು' ಆಗುತ್ತಲೇ ಬಂದದ್ದು 'ಎಂದಿ'ನಿಂದ ಎಂಬ ಪ್ರಶ್ನೆಗೆ ಮಾತ್ರ ಈ ಎರಡೂ ಕವಿತೆಗಳು 'ರಾಡಿ' 'ಪಾಚಿ'ಯತ್ತ ಬೆರಳು ನಿರ್ದೇಶಿಸಿ ಇದಕ್ಕೆ ಮುಕ್ತಿ ಹೇಳುವ ಮಾರ್ಗದತ್ತಲೇ ಸಾಗಿರುವದು ನಿರ್ವಿವಾದವಾದದ್ದು. ಆದರೆ, ಅದಕ್ಕೂ ಮುಖ್ಯವಾಗಿ, ನಾನು ಈ ಮೊದಲು ಎತ್ತಿದ ಪ್ರಶ್ನೆಗುತ್ತರವಾಗಿ, ಈ ಎರಡೂ ಕವಿತೆಗಳು, ತಮ್ಮ ಒಡಲಿನ ಸಮಸ್ತ ಪರಿಕರಗಳ ಪಕ್ಕದಲ್ಲೇ ಈ ಕವಿಗಳ ವೈಶಿಷ್ಟ್ಯಗಳನ್ನು ಬಿಡುಗಡೆ ಮಾಡು ವದು ಒಂದು ಚೋದ್ಯದ ವಿಷಯವೆನಿಸುತ್ತದೆ.

ಸಾರಾಂಶ ಇಷ್ಟು : ಜಿ. ಎಸ್. ಎಸ್. ಒಬ್ಬ 'ವಿಮರ್ಶಕ' ನಾಗಿ ವಿಶ್ಲೇಷಿಸಿ, ವಿವೇಚಿಸಿ' ನಂತರ ಕವಿಯಾಗಿ ದಾಖಲಿಸುತ್ತಾರೆ. ಆದರೆ, ಕಣವಿ ಒಬ್ಬ 'ಸಹೃದಯಿ' ಯಾಗಿ 'ಸಂವೇದಿಸಿ'ನಂತರ ಕವಿಯಾಗಿ 'ಅರಳಿಸು'ತ್ತಾರೆ. ಎಂದರೆ, ಜಿ.ಎಸ್.ಎಸ್. ರೀತಿ ಅನುಭವದೆದುರು ಮುಖಾಮುಖಿಯಾಗಿ ನಿಲ್ಲುವ ರೀತಿ. ಕಣವಿ ಅವರದು. 'ಆರ್ದ್ರ'ದಲ್ಲಿ ಒಳಗೊಳ್ಳುವ ಅನ್ಯೋನ್ಯತೆಯ ರೀತಿ. ಮುಖಾಮುಖಿ ಎಷ್ಟು ಮಟ್ಟಿಗೆ ಖಚಿತ ನಿರ್ದಿಷ್ಟತೆಯನ್ನು ನೀಡುತ್ತದೆಯೋ ಅಷ್ಟೇ ಮಟ್ಟಿಗೆ ಸೀಮಿತತೆಯನ್ನು ನೀಡುತ್ತದೆ. ಆದರೆ 'ಅನ್ಯೋನ್ಯತೆ' ಗದ್ಯದ ನೇರ ವಾಚ್ಯವನ್ನು ಬದಿಗಿಟ್ಟು ಆತ್ಮೀಯ ಗಾಢಗಳಿಂದ, ಗೂಢಗಳಿಂದ ಆಳದೊಳಗೊಳ್ಳುತ್ತದೆ. ಸರಳಗೊಳಿಸುವದಾದರೆ, ಜಿ. ಎಸ್. ಎಸ್. ಕಾವ್ಯದೊಂದಿಗೆ 'ಸಂವಾದ' ಹೆಚ್ಚು ಸಾಧ್ಯ ಎನ್ನುವದಾದರೆ ಕಣವಿ ಕಾವ್ಯದೊಂದಿಗೆ 'ಸಂವಹನ' ಹೆಚ್ಚು ಸಾಧ್ಯ ಎನ್ನಬಹುದೇನೋ.

ಆದರೆ 'ಸಂವಾದ' 'ಮತ್ತು' 'ಸಂವಹನ'ಗಳ ವ್ಯಾಪ್ತಿ ವಿವರಗಳನ್ನು ಖಚಿತ ವಾದ ಇಂತಿಷ್ಟೇ ಅರ್ಥ ಮಿತಿಗಳ, ಶಬ್ದಗಳ ವ್ಯಾಖ್ಯೆಯ ತೆಕ್ಕೆಯಲ್ಲಿ ಹೇಗೆ ಹಿಡಿದಿಡುವದಕ್ಕೆ ಸಾಧ್ಯ ? ಒಂದನ್ನು ಎಷ್ಟು ತಾನೇ ಹೊರತು ಪಡಿಸಿ ಇನ್ನೊಂದು ಸ್ವತಂತ್ರ 'ಅರ್ಥ ವ್ಯಾಪ್ತಿ' ಯನ್ನು ಪಡೆಮುಕೊಳ್ಳಲು ಸಾಧ್ಯ ? ಕಣವಿ ಮತ್ತು ಜಿ. ಎಸ್. ಎಸ್. ಕಾವ್ಯವನ್ನು ಒಟ್ಟಿಗೇ ಆಚೆಗಿಟ್ಟು ಕನ್ನಡ ಕಾವ್ಯದ 'ಒಟ್ಟು ವ್ಯಾಪ್ತಿ ವೈಶಿಷ್ಟ್ಯ' ಆಲೋಚಿಸಿದಂತೆ ಇದೂ ದುಸ್ಸಾಧ್ಯ.



# ಆಧುನಿಕ ಕಾವ್ಯ ಪರಂಪರೆಯೊಡನೆ ಸಂಬಂಧ

ಸಿದ್ಧಲಿಂಗ ಪಟ್ಟಣಶೆಟ್ಟಿ

ಕಣವಿಯವರ ಮೊದಲ ಕವನ ಸಂಗ್ರಹ 'ಕಾವ್ಯಾಕ್ಷಿ' ಪ್ರಕಟವಾದದ್ದು ೧೯೪೯ ರಲ್ಲಿ, ಶಿವರುದ್ರಪ್ಪನವರ ಮೊದಲ ಸಂಗ್ರಹ 'ಸಾಮಗಾನ' ಪ್ರಕಟವಾದದ್ದು ೧೯೫೧ ರಲ್ಲಿ. ಈ ಅವಧಿಯಲ್ಲಿ ಕನ್ನಡ ಕಾವ್ಯಾಕಾಶದಲ್ಲಿ ಬೆಳಗುತ್ತಿದ್ದವರು ಒಂದು ಕಡೆಗೆ ಬೇಂದ್ರೆ ಮತ್ತು ಸಂಗಡಿಗರು ಹಾಗೂ ಇನ್ನೊಂದೊಡೆಗೆ ಕುವೆಂಪು ಮತ್ತು ಅವರ ಅನುಯಾಯಿಗಳು. ನವೋದಯ ಅಥವಾ ರಮ್ಯ ಎಂದು ಹೆಸರಾದ ಭಾವಗೀತಾತ್ಮಕ ಕಾವ್ಯವನ್ನು ಆಗಿನ ಕವಿಗಳು ಗುಣಾತ್ಮಕವಾಗಿ ಹಾಗೂ ಗಣನಾತ್ಮಕವಾಗಿ ಸಾಕಷ್ಟು ಪ್ರಮಾಣದಲ್ಲಿ ರಚಿಸಿದ್ದರು. ಆ ಕಾಲದಲ್ಲಿ ಬರೆಯುತ್ತಿದ್ದ ಹೆಚ್ಚಿನ ಕವಿಗಳನ್ನು ಅವರ ಪ್ರಭಾವ ವ್ಯಾಪಿಸಿತ್ತು, ಆವರಿಸಿತ್ತು. ಇಂಥ ಭಾವಗೀತಾತ್ಮಕ ನವೋದಯ ಕಾವ್ಯದ ಶಿಖರ ಸ್ಥಿತಿಯಲ್ಲಿ ಹೊಸದಾಗಿ ತಮ್ಮ ಕಾವ್ಯ–ಜೀವನವನ್ನು ಆರಂಭಿಸಿದ ಕಣವಿ, ಶಿವರುದ್ರಪ್ಪನಂಥವರಿಗೆ ಆಗಿನ ಗುರು–ಪರಂಪರೆ ಹಾಗೂ ನೇರ ಪ್ರಭಾವಗಳನ್ನು ಬಿಟ್ಟು ಹೊರಬರುವುದು ಸಾಧ್ಯವೇ ಇರಲಿಲ್ಲ. ಕಣವಿಯವರನ್ನು ಬೇಂದ್ರೆಯವರ ನೆರಳು ಬಾಧಿಸಿದೆ. ಶಿವರುದ್ರಪ್ಪನವರನ್ನು ಕುವೆಂಪು ಅವರ ಭೂತ ಪೀಡಿಸಿದೆ. ತಮ್ಮ ಮೇಲೆ ಚಾಚಿದ ಇಂಥ ಪ್ರಭಾವದ ನೆರಳುಗಳಿಂದ ದೂರ ಸರಿಯಲು ಇಬ್ಬರೂ ನಂತರ ಬಹಳ ಶ್ರಮಿಸಿದ್ದಾರೆ. ಹೀಗೆ ಮುಖ್ಯವಾಗಿ ಇವರಿಬ್ಬರೂ ತಮ್ಮ ಸ್ವಂತಿಕೆಗಾಗಿ ಹೋರಾಟ ಮಾಡುತ್ತಿದ್ದಾಗಲೂ ತಮ್ಮ ಮನೋಮಂದಿರದ ಮೂಲ ದೇವತೆಗಳ ಬಗ್ಗೆ ಗುಪ್ತ ಗೌರವವನ್ನು ಕೊನೆಯವರೆಗೂ ಉಳಿಸಿಕೊಂಡು

ಬಂದಿದ್ದರಿಂದ ಕೆಲವು ವಿಮರ್ಶಕರ ನೇರ ದಾಳಿ ಅಥವಾ ಅವಜ್ಞೆ ಅಥವಾ ತಿರಸ್ಕಾರಕ್ಕೆ ತುತ್ತಾಗಿ ನಂತರದ ಕಾವ್ಯ ಜೀವನದಲ್ಲಿ ಬಹಳಷ್ಟು ಬಳಲಿದ್ದಾರೆ.

ನವೋದಯ ಕಾವ್ಯದ ಸಹಜ ವಸ್ತುಗಳಾದ ಪ್ರಕೃತಿ, ಪ್ರಣಯ, ಸ್ನೇಹ, ವಾತ್ಸಲ್ಯ, ವ್ಯಕ್ತಿ–ಗೌರವ, ಸೃಷ್ಟಿಯ ರಹಸ್ಯ ಶಕ್ತಿಯ ಬಗ್ಗೆ ಮನಸ್ಸಿನಲ್ಲಿ ಮೂಡುವ ಕುತೂಹಲ ಹಾಗೂ ಅದರಿಂದ ಹುಟ್ಟುವ ನವಿರಾದ ದಾರ್ಶನಿಕತೆ, ದೇಶಪ್ರೇಮ ಮುಂತಾದ ಭಾವನೆಗಳು ಕಣವಿ ಹಾಗೂ ಶಿವರುದ್ರಪ್ಪನವರ ಆರಂಭದ ಸಂಗ್ರಹಗಳಲ್ಲಿ ಸ್ವಾಭಾವಿಕವಾಗಿಯೇ ಮೂಡಿ ಬಂದಿವೆ. 'ಕಾವ್ಯಾಕ್ಷಿ'ಗೆ ಮುನ್ನುಡಿ ಬರೆದ ಬೇಂದ್ರೆಯವರು ಕಣವಿಯವರ ಆರಂಭದ ಕಾವ್ಯದ ವಸ್ತುಗಳನ್ನು ಕುರಿತು 'ಮಾತೃವಾತ್ಸಲ್ಯ, ಮಾತೃಭಾಷಾವಾತ್ಸಲ್ಯ, ಸೌಂದರ್ಯದೃಷ್ಟಿ, ಅಭೀಪ್ಸೆಯ ತೀವ್ರತೆ, ನವಸ್ವಾತಂತ್ರ್ಯದ ಎಚ್ಚರ, ಹೊಸ ಮೌಲ್ಯಗಳ ಸ್ವೀಕಾರ, ದೇಶಾಭಿಮಾನ, ರಾಷ್ಟ್ರಭಕ್ತಿ, ಆದರ್ಶ ಪ್ರೀತಿ ಇವೇ ಮೊದಲಾಗಿ ಅವರ ಕಾವ್ಯ ಸ್ಫೂರ್ತಿಯ ವಿಷಯ ಗಳಾಗಿವೆ' ಎನ್ನುತ್ತ ಪ್ರಥಮ ಸಂಕಲನದಲ್ಲಿರಬೇಕಾದುದೆಲ್ಲವೂ ಇಲ್ಲಿದೆ ಎಂದು 'ಸಮಕಾಲೀನ ಸಾಹಿತ್ಯದ ಪ್ರತಿಧ್ವನಿಯೂ ಗತಿಧ್ವನಿಯೂ' ಬರುವುದು 'ಕೆಲಮಟ್ಟಿಗೆ ಅನಿವಾರ್ಯ' ಎಂದಿದ್ದಾರೆ. ಈ ಮಾತನ್ನು ಶಿವರುದ್ರಪ್ಪನವರ ಆರಂಭದ ಕಾವ್ಯದ ಬಗೆಗೂ ಹೇಳಬಹುದಾಗಿದೆ.

ಕಣವಿಯವರ ಆರಂಭದ ಕವನಗಳ ಮೇಲೆ ಬಿ.ಎಂ.ಶ್ರೀ., ಕುವೆಂಪು, ಮಧುರಚೆನ್ನ, ಆನಂದಕಂದರ ಪ್ರಭಾವ ದಟ್ಟವಾಗಿದೆ. ಬೇರೆ ಬೇರೆ ರೀತಿಯಲ್ಲಿ ಈ ಪ್ರಭಾವಗಳನ್ನು ಸ್ವೀಕರಿಸಿದರೂ ಕಣವಿಯವರು ತಮ್ಮ ವಿಶಿಷ್ಟ ಪದ–ಬಂಧ ಹಾಗೂ ಲಯ–ಸಾಧನೆಯ ಮುದ್ರೆಯೊಂದಿಗೆ ತಮ್ಮದೇ ಆದ ಶೈಲಿಯೊಂದನ್ನು ರೂಪಿಸ ಲಾರಂಭಿಸಿದ ಲಕ್ಷಣಗಳು ಸಹ ಆಗಿನ ಅವರ ಕವನಗಳಲ್ಲಿ ಸ್ಪಷ್ಟವಾಗಿ ಗೋಚರಿಸು ತ್ತವೆ. ತಮ್ಮ ಮೊದಲ ಸಂಗ್ರಹದಿಂದಲೇ ಅವರು ತಮಗೆ ಅತ್ಯಂತ ಪ್ರಿಯವಾದ ಸುನೀತವನ್ನು ನಾದುತ್ತ, ಮಿದ್ದುತ್ತ ಬಂದಿರುವುದನ್ನು ಗುರುತಿಸಬಹುದು. ಶಿವ ಶರಣರ ವಚನಗಳ ಹಾಗೂ ಸರ್ವಜ್ಞನ ತ್ರಿಪದಿಗಳ ಭಾಷಾಸೌಷ್ಠವವನ್ನು ಸಹ ಕಣವಿ ಮೊದಲಿನಿಂದಲೇ ತಮ್ಮ ಕಾವ್ಯಕ್ಕೆ ಬಳಸಿಕೊಳ್ಳುತ್ತ ಬಂದಿದ್ದಾರೆ. ಅವರ ಕಾವ್ಯೋದ್ಯೋಗದ ಆರಂಭದ ದಿನಗಳಿಂದಲೇ ಅವರೊಂದಿಗೆ 'ಕಣ್ಣ ಮಿಟುಕಿಸು ವಾಟ' ಆಡುತ್ತಿರುವ ಬೆಳಕು ತನ್ನ ವೈವಿಧ್ಯಪೂರ್ಣ ಬಲೆಗಳನ್ನು ಬೀಸುತ್ತ ಅವರೊಂದಿಗೆ ಬೆಳೆಯುವುದನ್ನು, ಕಣವಿಯವರು ಅದಕ್ಕೆ ತಾವು ಮನಸೋತಿದ್ದರೂ ಅದು ತಮ್ಮನ್ನು ಸೋಲಿಸದಂತೆ ಎಚ್ಚರದಿಂದ ಸೃಜನಶೀಲತೆಯನ್ನು ಮುಂದುವರಿಸುವುದನ್ನೂ ಸಹ ಆಗಿನಿಂದಲೇ ನೋಡಬಹುದಾಗಿದೆ.

ಶಿವರುದ್ರಪ್ಪನವರು ಕಣವಿಯವರಂತೆಯೇ ಸಾತ್ವಿಕ ಕವಿ. ಆದರೂ ಕಾವ್ಯೋದ್ಯೋಗವನ್ನು, ರಚನಾ ಪ್ರಾಕಾರದ ವಿವಿಧ ಆಯಾಮ ಭಿತ್ತಿಗಳನ್ನು ಸುಲಭವಾಗಿ ಕಟ್ಟುವಲ್ಲಿ, ನೆಲೆಯೂರಿಸುವಲ್ಲಿ ಅವರು ಕಣವಿಯವರಂತೆ ಶ್ರಮಿಸಿದವರಲ್ಲ. ಅವರ ಆರಂಭದ ಸಂಗ್ರಹಗಳಲ್ಲಿಯೂ ನವೋದಯದ ವಿಷಯ ವಸ್ತು ವ್ಯಾಪ್ತಿಯೇ ಇದ್ದರೂ, ಕುವೆಂಪು ಬಿ. ಎಂ. ಶ್ರೀ, ಪುತಿನ ಅವರನ್ನು ಅನುಸರಿಸಿ ಬರೆದರೂ ಅಲ್ಲಿ ತಮ್ಮತನವನ್ನು ಬಿಂಬಿಸುವ ನಿಖರ ಪ್ರಯತ್ನ ಮಾಡಿದ ಬಗ್ಗೆ ಅವರ ಕಾವ್ಯದಲ್ಲಿ ಹೆಜ್ಜೆ ಗುರುತುಗಳು ಕಾಣಸಿಗುವುದಿಲ್ಲ. ಆದರೆ ಕಣವಿಯವರಿಗಿಂತಲೂ ಸಹಜ ಸ್ಫೂರ್ತವಾಗಿ ಚಿಮ್ಮುವ ಅವರ ಕಾವ್ಯ ಮಳೆಗಾಲದ ತೊರೆಗಳಂತೆ ನಿರಾತಂಕವಾಗಿ ದಡಬಡನೆ ಹರಿಯುತ್ತಲೇ ಸಾಗುತ್ತದೆ. ಸಂಕಲನದಿಂದ ಸಂಕಲನಕ್ಕೆ ಛಂದೋಲಯಗಳ ಬಂಧನದಿಂದ ಬಿಡುಗಡೆಗೆ ಯತ್ನಿಸಿದ್ದರೂ ಅದನ್ನು ಹಟದಿಂದ ಸಾಧಿಸುವ ಛಲಗಾರಿಕೆ ಕಣವಿಯವರಲ್ಲಿ ಕಂಡಂತೆ ಶಿವರುದ್ರಪ್ಪನವರಲ್ಲಿ ಕಾಣುವುದಿಲ್ಲ.

'ಕಾವ್ಯಾಕ್ಷಿ'ಯಲ್ಲಿಯ ಒಂದು ಕವನದಲ್ಲಿ ಕಣವಿಯವರು ತಮ್ಮ ಮನಸ್ಸನ್ನು ಮುಕ್ತವಾಗಿ ನೋಡಿಕೊಂಡಿದ್ದಾರೆ. ಅಲ್ಲಿಂದ ಇಲ್ಲಿಯವರೆಗೂ ಅದೇ 'ಒಳದನಿ'ಯನ್ನು ಮಾರ್ನುಡಿಸಲು ಅವರು ಶ್ರಮಿಸುತ್ತಿರುವ ಹಾಗೆ ಭಾಸವಾಗುತ್ತದೆ. ಈ ಕವನದ ವಸ್ತು, ಶಿಲ್ಪ–ಶೈಲಿ, ಭಾಷೆಗಳ ಹೊಳವು ಹೆಚ್ಚು ಕಡಿಮೆ ಅವರ ಸಂಪೂರ್ಣ ಕಾವ್ಯ–ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ ಎಂದು ನನ್ನ ಭಾವನೆ.

ನನ್ನೆದೆಯ ಗೂಡಿನೊಳಗಾವುದೋ ಹಕ್ಕಿಯುಲಿ
ಚಿಲಿಪಿಲಿಸುತಿಹುದಾವ ನಿಮಿಷದಲ್ಲು ;
ಜಗದ ಮೊರೆ–ಕರೆಗಳಿಗೆ ಚೆಲುವು-ಚಿನ್ನಾಟಕ್ಕೆ
ದನಿಗೂಡಿ ಹಾಡುತಿದೆ ಕನಸಿನಲ್ಲು !
ಹಾಡ ಸವಿಸೊಲ್ಲಿನಲೆ ತೋಡುತಿದೆ ಮತ್ತೊಂದು
ನೋವು ನರಳಾಟಗಳ ವಿಷಮ ಬಿಂದು ;
ಮಣ್ಣ ಕಣಕಣದಲ್ಲಿ ಪಾರದ ಹನಿಹನಿಯಲ್ಲಿ
ಹುಡುಕುತಿಹುದಾವುದನೊ ಮರೆಗೆ ನಿಂದು.
ಎದೆಗುದಿಯೊ ಹದಗೆಟ್ಟ ಮುದಗೆಟ್ಟದನಿಯೋ !
ಒಲವಿನಲೆಯುಲಿಯಿಂದ ತೂರ್ವ ಸಿರ್ಪನಿಯೊ !
ಹಲವಾರು ಕೊರತೆ–ಕೊರಕಲಿನ ಸೀಳ್ದನಿಯೊ !
ಒಳದನಿಯೆ ಇವಕೆಲ್ಲ ಉಸಿರಾದುದೇನೊ !
ಇದಕ್ಕೆ ಹೆಚ್ಚಿನ ವಿವರಣೆ ಬೇಕಿಲ್ಲ.

'ಜಡೆ' ಎಂಬ ಕವನದಲ್ಲಿ ಶಿವರುದ್ರಪ್ಪನವರು ಮೊದಲು ಹಲವು ಬಗೆಯ ಜಡೆಗಳ ಬಗ್ಗೆ ವಿವರವಾಗಿ ಹೇಳುತ್ತಾರೆ. ಕೊನೆಗೆ

ಎಲ್ಲವೂ ರಮ್ಯವೆಲ್ಲ !
ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ
ಕಾಣದಲ್ಲ !

ಎಂದು ಮುಗಿಸುತ್ತಾರೆ. ಕಡೆಯ ಈ ಮೂರು ಸಾಲುಗಳಲ್ಲಿ ಹರಳುಗಟ್ಟಿದ ಸಂಕೇತವೇ ಶಿವರುದ್ರಪ್ಪನವರ ಕಾವ್ಯಾರ್ಥ ಸಂಚಯ ಮತ್ತು ಉದ್ದೇಶ. ಆದರೆ ಇದನ್ನು ಹೇಳುವಾಗ ಅವರು ಬಳಸುವ ಅಥವಾ ವ್ಯಯಿಸುವ ಪದಗಳ ಸಂಖ್ಯೆ ವಿಪುಲ. ಕಣವಿ ಹಾಗೂ ಶಿವರುದ್ರಪ್ಪನವರ ಕಾವ್ಯ–ಸಾಧನೆಯ ದಿಕ್ಕು ಒಂದೇ ಆಗಿದ್ದರೂ ಶಿಲ್ಪ, ಬಂಧ, ಭಾಷೆ ಇತ್ಯಾದಿ ದೃಷ್ಟಿಯಿಂದ ಅವರು ಸಾಗುವ ದಾರಿಗಳು ಅವುಗಳ ಉದ್ದ–ಅಗಲ ಗುಣಧರ್ಮಗಳು ಬೇರೆ ಬೇರೆ. ಯಾವುದೇ ಸ್ಪಷ್ಟವಾದ ನಿರ್ಧಾರಕ ಘೋಷಣೆಯ ಸಾಧನೆ–ಸಿದ್ಧಿಗಳ ಉದ್ದೇಶ ಹೊಂದುವ ನಡಿಗೆ ತಮ್ಮದಲ್ಲ ; ಬದುಕು ಬಂದಂತೆ, ಅದು ಇದ್ದಂತೆ ಅದನ್ನು ಎದುರಿಸುವ ಸಮಾಧಾನ ತಮಗೆ ಇಷ್ಟವಾದುದು ಎಂಬ ಮಾತನ್ನು ಶಿವರುದ್ರಪ್ಪನವರು 'ದೀಪದ ಹೆಜ್ಜೆ'ಯಲ್ಲಿ ಹೇಳುತ್ತಾರೆ :

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ನನಗೆ.
ದಾರಿ ನೂರಾರಿವೆ ಬೆಳಕಿನರಮನೆಗೆ!
ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ;
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂತ.

ಹೀಗೆ ಶಿವರುದ್ರಪ್ಪ ತಮ್ಮ ಅನಿಸಿಕೆಗಳನ್ನು, ಭಾವದ ಹೊಳಹುಗಳನ್ನು ನೇರವಾಗಿ ನಿವೇದಿಸುತ್ತಾರೆ, ಓದುಗರೊಂದಿಗೆ ಸಂವಾದ ನಡೆಸುತ್ತಾರೆ. ಯಾವುದೇ ವಾದ, ಸಿದ್ಧಾಂತ, ಇಜಮ್ಮುಗಳ ಹಮ್ಮು–ಬಿಮ್ಮು ತಮಗಿಲ್ಲ ಎಂಬ ಮಾತನ್ನು ಸಹ ಮನಸ್ಸು ಬಿಚ್ಚಿ ಹೇಳಿ ಬಿಡುತ್ತಾರೆ. ಅವರಲ್ಲಿ ಮಾತು ಹೆಚ್ಚು, ವಾಚಾಳಿ ಎನಿಸಿದರೂ ಅವರು ಗುಮ್ಮನಗುಸುಕರಲ್ಲ. ಈ ಕಾರಣದಿಂದಾಗಿ ಕಣವಿಯವರಲ್ಲಿಲ್ಲದ ಒಂದು ಬಗೆಯ ನಾಟ್ಯಾಯಮಾನತೆ ಅವರಲ್ಲಿ ಕಾಣಸಿಗುತ್ತದೆ. ಸಾಮಾನ್ಯ ಓದುಗ ಹಾಗೂ ಕಾವ್ಯಾಸಕ್ತರನ್ನು ಈ ನಾಟ್ಯ ಗುಣದಿಂದಾಗಿ ಅವರು

ಬೇಗನೆ ತಣಿಸುತ್ತಾರೆ. ಕಣವಿಯವರು ಹೀಗಲ್ಲ. ಅವರನ್ನು ಮತ್ತೆ ಮತ್ತೆ ಓದಬೇಕಾಗುತ್ತದೆ. ಅರ್ಥದ ಅಲೆ ಅಲೆಗಳನ್ನು ಬಿಚ್ಚಿ ಬಿಡಿಸಿ ನೋಡಬೇಕಾಗುತ್ತದೆ. ಇಂಥ ಪ್ರಯತ್ನ ಪರಿಶ್ರಮದ ಪ್ರತೀಕಗಳ ರಚನೆಯಿಂದ ದೂರ ಉಳಿದು ಶಿವರುದ್ರಪ್ಪನವರು ಬರೆದ ಭಾವಗೀತೆಗಳು, ಸೌಂದರ್ಯಾರಾಧನೆಯ ಕವನಗಳು ಹಾಗೂ ಸಮಾಜ ಸ್ಥಿತಿಗಳಿಗೆ ಸ್ಪಂದಿಸಿದ ಚಿತ್ರ ಕವಿತೆಗಳು ಕಣವಿಯವರಿಗಿಂತ ಹೆಚ್ಚು ಆಕರ್ಷಕವೆನಿಸುತ್ತವೆ, ಆಪ್ಯಾಯಮಾನವಾಗುತ್ತವೆ.

ಬದುಕು, ಸಮಾಜ ಹಾಗೂ ತನ್ಮೂಲಕ ಉದ್ಭವಿಸಿದ ತಮ್ಮ ಅನುಭವಗಳಿಗೆ ಕಾವ್ಯ ಶರೀರ ನೀಡುವ ವಿಷಯದಲ್ಲಿ ಈ ಇಬ್ಬರೂ ಕವಿಗಳಿಗೆ ಸಾಕಷ್ಟು ಪ್ರೀತಿ, ಶ್ರದ್ಧೆ, ಕಳಕಳಿಯಿದೆ. ಇಬ್ಬರಲ್ಲಿಯೂ ಆದರ್ಶ ಹಾಗೂ ಆಶಾವಾದಗಳು ಮೂಲ ಸಂವೇದನೆಗಳಾಗಿ ವಿಜೃಂಭಿಸುತ್ತವೆ. ಈ ದೃಷ್ಟಿಯಿಂದ ಇವರಿಬ್ಬರನ್ನೂ 'ಶುದ್ಧ' ಕವಿಗಳೆಂದೇ ಪರಿಗಣಿಸಬೇಕು, ಪರಿಶೀಲಿಸಬೇಕು. ಯಾವುದೇ ನಿಯಮ, ಸಿದ್ಧಾಂತ, ಸಂಪ್ರದಾಯ ಅಥವಾ ನಿಶ್ಚಿತ ಕಾವ್ಯ ಪರಂಪರೆಯ ಕಟ್ಟು ಪಾಡಿನ ಬೇಲಿಯಲ್ಲಿ ಬಂಧಿಸಿ ಇವರನ್ನು ವಿಮರ್ಶಿಸುವುದು ಸಂಕುಚಿತ ದೃಷ್ಟಿಯ ಅನ್ಯಾಯದ ನಿರ್ಣಯ-ಶೈಲಿಯಾಗುತ್ತದೆ. ಕುರ್ತಕೋಟಿಯವರು ಕಣವಿಯವರನ್ನು ವರ್ಣನಾತ್ಮಕ ಕಾವ್ಯದ ಕವಿಯೆಂದು ದ್ವಂದ್ವಾರ್ಥಕವಾಗಿ ಕರೆದು, ಅವರು ಕೇವಲ ಬಣ್ಣಗಾರಿಕೆಯ ತಟಸ್ಥ ಕವಿ, ಸ್ವಾನುಭವದ ಅರ್ಥಸಂವಹನೆಯ ದೃಷ್ಟಿಯಿಂದ ಅಷ್ಟು ಮುಖ್ಯ ಕವಿಯಲ್ಲ ಎಂದು ಸೂಚಿಸುವುದಾಗಲಿ ಅಥವಾ ಶಿವರುದ್ರಪ್ಪ ಹಾಗೂ ಕಣವಿ ಒಂದೇ ನಾಣ್ಯದ ಎರಡು ಮಗ್ಗಲುಗಳು, ಚೆನ್ನ–ವೀರ ಹಾಗೂ ಶಿವ–ರುದ್ರಗಳಲ್ಲಿ ಅಂತರವಿಲ್ಲ ಎಂದು ಘೋಷಿಸುತ್ತ ಅವರಿಬ್ಬರನ್ನೂ 'ಸಮನ್ವಯ'ದ ಕವಿಗಳು ಎಂದು ಅವರ ಸೃಜನಾತ್ಮಕ ಬರವಣಿಗೆಯನ್ನು ಅಲಕ್ಷಿಸುವಂತೆ ಪರೋಕ್ಷವಾಗಿ ಪ್ರೇರೇಪಿಸುವುದಾಗಲಿ ಅಥವಾ ಅನುಸರಣಾತ್ಮಕ ಧೋರಣೆಯ ಬರವಣಿಗೆ ಎಂದು ಹೇಳುವುದಾಗಲಿ ಸಾಹಿತ್ಯ ಸೃಷ್ಟಿಯ ಸ್ವಸ್ಥ ಪ್ರವಾಹವನ್ನು ಕುಂಠಿತಗೊಳಿಸಿದಂತಾಗುತ್ತದೆ, ಪ್ರಾಮಾಣಿಕ ವಿಚಾರ ಸರಣಿಯ ವಿಕಾಸಕ್ಕೆ ಆತಂಕವನ್ನುಂಟು ಮಾಡಿದಂತಾಗುತ್ತದೆ. ಹೀಗೆ ಮಾಡುವುದು ಮೌಲ್ಯ ವಂಚನೆ.

ನವೋದಯದ ಭಾವಗೀತೆಗಳಿಂದ ಆರಂಭಿಸಿ, ನವ್ಯ, ಬಂಡಾಯ ಹಾಗೂ ಈಗ ಚಲಾವಣೆಯಲ್ಲಿರುವ ದಲಿತೋದ್ಧಾರಕ ಪ್ರವೃತ್ತಿಯ ವರೆಗಿನ ಎಲ್ಲ ಬಗೆಯ ಭಾವ, ಪ್ರಯೋಗಗಳಿಗೂ ತಮ್ಮನ್ನು ತೆರೆದ ಮನಸ್ಸಿನಿಂದ ತೋರಿಸಿಕೊಳ್ಳುತ್ತ, ತಮ್ಮ ಶಕ್ತಿಗೆ ಪ್ರಾಮಾಣಿಕವಾಗಿ ಅಭಿವ್ಯಕ್ತಿ ನೀಡುತ್ತ ಬಂದಿರುವ ಇವರಿಬ್ಬರ

ಲ್ಲಿಯೂ ಕನ್ನಡದ ಎಲ್ಲ ಪಾದ ಪಂಗಡಗಳನ್ನು ಎಲ್ಲ ಶ್ರೇಷ್ಠ ವೈಚಾರಿಕ ಧೋರಣೆಗಳನ್ನು ಬಿಂಬಿಸುವ ವತ್ಸಲ ಕವನಗಳಿವೆ. ಇದೇ ಹೊತ್ತಿಗೆ ಎಲ್ಲ ರೀತಿಯ ಸ್ವತಂತ್ರ ಅನಿಸಿಕೆಗಳನ್ನು ಯಾರದೇ ವಿಮರ್ಶೆ ಅಥವಾ ಬ್ರ್ಯಾಂಡಿನ ಹಂಗು ತೊರೆದ್ಯ ನಿರ್ಭಿಡೆಯಿಂದ ಶಿವರುದ್ರಪ್ಪನವರು ಬರೆದಷ್ಟು ಧೈರ್ಯದಿಂದ, ಮುಕ್ತತೆಯಿಂದ ಕಣವಿಯವರು ಬರೆದಿಲ್ಲವೆನ್ನುವುದನ್ನು ನಾನು ಗಮನಿಸಿದ್ದೇನೆ, ಕಣವಿಯವರು ತುಂಬ ಎಚ್ಚರಿಕೆಯಿಂದ ಹೆಜ್ಜೆಯಿಡುವ ಕವಿ. ತಮ್ಮ ಜಾಣ್ಮೆ, ತೂಕದಲ್ಲಿ ಎಲ್ಲಿಯೂ ಸೋಲದೇ ನಡೆಯುವ ಇಂಥ ರೀತಿಯಿಂದಾಗಿ ಅವರು ಅನೇಕ ಸಲ ತಮ್ಮ ನಿಜವಾದ 'ಒಳದನಿಗಳನ್ನು' ಕಾವ್ಯಾತ್ಮಕಗೊಳಿಸದೇ ಉಳಿದಿರುವರೇನೋ ಅನಿಸುತ್ತದೆ. ಆದರೆ ಅವರು ಮುಚ್ಚುವ, ಮರೆಮಾಚುವ, ಅಡಗಿಸಿಡುವ ರೀತಿ ಅವರ ಶಿಲ್ಪಾಕಾರ ಹಾಗೂ ಭಾಷಾವರಣದ ಸುಭಗ ನಿರ್ಮಾಣದ ಕಟ್ಟಡದಲ್ಲಿ ಕಲಾತ್ಮಕವಾಗಿ ಅಡಗಿ ಬಿಡುತ್ತದೆ. ಶಿವರುದ್ರಪ್ಪನವರು ಮಾತ್ರ ಇಂಥದಕ್ಕೆ ಕಾಳಜಿ ಮಾಡುವುದೇ ಇಲ್ಲ. ಜನಪರ ದೃಷ್ಟಿಗೆ ಪಾಲಿರುವ ಅವರು ಮುನ್ನಡೆಯುತ್ತ ದಾಪುಗಾಲು ಹಾಕುತ್ತ ಸಾಗಿಬಿಡುತ್ತಾರೆ,

ಸಮಾಜವನ್ನು ಬಿಚ್ಚುಗತ್ತಿಯಿಂದ ತರೆಯುವ ತಿವಿಯುವ ಉದ್ದೇಶದ ನವ್ಯ ಬರವಣಿಗೆಗೆ ಇಬ್ಬರ ಕಾವ್ಯವೂ ಉದಾಹರಣೆಯಾಗದು. ಆದರೆ ಏಕಾಕಿಯಾಗಿ, ತನ್ನ ಕಣ್ಣು ಕಂಡಿದ್ದನ್ನು, ಮನಸ್ಸು ಭಾವಿಸಿ ಧೇನಿಸಿದ್ದನ್ನು ತೀಕ್ಷ್ಣವಾಗಿ ವಿಮರ್ಶಿಸುವ ಸ್ವಭಾವ ಶಿವರುದ್ರಪ್ಪನವರನ್ನು ಸತ್ವದ ದೃಷ್ಟಿಯಿಂದ ನವ್ಯತೆಯ ಹೆಚ್ಚು ಪ್ರಾಮಾಣಿಕ ಕವಿಯನ್ನಾಗಿಸುತ್ತದೆ. ಕಣವಿಯವರ ಕಾವ್ಯ ಸೂಕ್ಷ್ಮವಾಗಿ ಸೂಚಿಸಿ, ರೂಪಕಾತ್ಮಕವಾಗಿ ನರ್ತಿಸುವ ಶಿಷ್ಟ ನವಿಲಾಗುತ್ತದೆ. ತಮ್ಮ ಅತ್ಯಂತ ಆಪ್ತವಾದ, ಹೃದ್ಯವಾದ ನೋವುಗಳನ್ನು ನಿರಾಡಂಬರವಾಗಿ ನೇರವಾಗಿ ತೆರೆದಿಡುವ ಧೈರ್ಯ ಕಣವಿಯವರಿಗಿಂತ ಶಿವರುದ್ರಪ್ಪನವರಲ್ಲಿ ಹೆಚ್ಚಾಗಿದೆ, ಹೀಗಾಗಿ ತಮ್ಮ ಸುತ್ತಲಿನ ನವ್ಯರನ್ನೂ ಅವರು ಗೇಲಿ ಮಾಡಬಲ್ಲರು. ಆದರೆ ಇಂಥಲ್ಲಿ ಕಣವಿಯವರಿಗೆ ಅವರ ನಯ-ನಾಜೂಕುಗಳು, ಲಯ-ಪ್ರತಿಮೆಗಳು ಅಡ್ಡಿಯಾಗಿ ಬಿಡುತ್ತವೆ.

ಇಂಥ ಗುಣಗಳ ತಾಕಲಾಟದಲ್ಲಿ ಮತ್ತು ಸುಮಾರು ೪೦-೪೫ ವರ್ಷಗಳ ಅವಧಿಯಲ್ಲಿ ಸಮೃದ್ಧಿಯಾಗಿ ಬೆಳೆದು ಟಿಸಿಲೊಡೆದಿರುವ ಉತ್ತರನವೋದಯ, ನವ್ಯ, ನವ್ಯೋತ್ತರ ಮುಂತಾದ ಪಂಥ-ಪ್ರಕಾರಗಳಲ್ಲಿ ಈತನಕವೂ ತಮ್ಮನ್ನು ಪ್ರೀತಿಯಿಂದ ತೊಡಗಿಸಿಕೊಂಡಿರುವ ಇವರಂಥ ಕವಿಗಳು ಕನ್ನಡ ಕಾವ್ಯ ಸೃಷ್ಟಿಯಲ್ಲಿ ನಿರತರಾಗಿರುವ ಹಿರಿಯ ಕವಿಗಳಲ್ಲಿ ಬೇರೆಯವರು ಇಲ್ಲವೆಂಬುದೇ ಇವರಿಬ್ಬರ

ಹಿರಿಮೆ ಮತ್ತು ವೈಶಿಷ್ಟ್ಯ. ಕಣವಿಯುವರದು ಚತುರ ಕಾವ್ಯವಾದರೆ ಶಿವರುದ್ರಪ್ಪನವರದು ಉದಾರ ಕಾವ್ಯ. ವಿಡಂಬನೆ, ವ್ಯಕ್ತಿ ಹಾಗೂ ಸಮಾಜ–ಸಂಸ್ಥೆಗಳನ್ನು ಕುರಿತ ನಿರೂಪಣೆಗಳಲ್ಲದೆ ಶಿಶುಗೀತೆಗಳಲ್ಲಿ ಸಹ ಕಣವಿ ತಮ್ಮ ಸಂಭಗತಗೆ ಧಕ್ಕೆಯಾಗಬಾರದೆಂಬ ಕಾಳಜಿಗೆ ಒತ್ತು ಕೊಡುತ್ತಾರೆ, ಪರಂಪರೆಯನ್ನು ಹಿಡಿದರೂ ಬಿಡದವರಂತೆ, ಅದರ ಒತ್ತಿನಲ್ಲಿಯೇ ಹೊಸದಾಗಿ ಕಾಣಲು ಹವಣಿಸುತ್ತಾರೆ ; ತಮ್ಮ ತಳಮಳವನ್ನು ಜಳಜಳವಾಗಿ ಹೊಳೆಯಿಸುತ್ತ, ತುಂಬ ಹಾಳತಾಗಿ, ಎಚ್ಚರಿಕೆಯಿಂದ ದರ್ಶಿಸುತ್ತಾರೆ. ಆದರೆ ಶಿವರುದ್ರಪ್ಪನವರ ಕಾವ್ಯದಲ್ಲಿ ಇಂಥ ದರ್ಶನ–ಪ್ರದರ್ಶನಗಳಿಲ್ಲ. ಅಭಿವ್ಯಕ್ತಿಯ ಗಟ್ಟಿತನಕ್ಕೆ ಅಥವಾ ಶಬ್ದಗಳ ಮಿತವ್ಯಯದ ಮೂಲಕ ನಿರ್ಮಿಸಬೇಕಾದ ಕಾವ್ಯಪ್ರತಿಮೆಗಾಗಿ ಕಾಯದೇ ಎಲ್ಲ ಬಗೆಯ ಅಸ್ವಸ್ಥತೆಯ, ಅನಾರೋಗ್ಯದ ವಿರುದ್ಧ ಧಿಗ್ಗನೇ ಎದ್ದು ನಿಲ್ಲುತ್ತಾರೆ, ಆದರೆ ಇಂಥ ಹೊತ್ತಿನಲ್ಲಿ ತಮ್ಮ ಬರವಣಿಗೆ ಗದ್ಯಾತ್ಮಕವಾಗದ ಹಾಗೆ ಮಾತ್ರ ಕಾಳಜಿ ವಹಿಸುತ್ತಾರೆ. ಇಂಥ ಅಭಿವ್ಯಕ್ತಿಯಿಂದಾಗಿಯೇ ಶಿವರುದ್ರಪ್ಪನವರು ದೊಡ್ಡ ಕ್ಯಾನವಾಸಿನ ಹೆಚ್ಚು ಸಹಜವಾದ ಕಾವ್ಯವಾಗುತ್ತದೆ. ಕಲ್ಪಿತ ಚಿತ್ರ–ನಿರ್ಮಿತಿಗಿಂತ ದರ್ಶಿತ ಚಿತ್ರ–ನಿರೂಪಣೆಯನ್ನು ಅವರ ಕಾವ್ಯ ಆಶ್ರಯಿಸುತ್ತದೆ.

ಕಣವಿಯುವರಿಗಿರುವ ಗ್ರಾಮ್ಯ ಭಾವ ಪ್ರತೀಕಗಳ ಬಲ ಶಿವರುದ್ರಪ್ಪನವರಿಗಿಲ್ಲ. ಆದರೂ ತನ್ನ ನೇರ ನಡೆಯಿಂದಾಗಿ ಅವರ ಕಾವ್ಯ ಮುಗ್ಧ ಆಕರ್ಷಣೆಯ ರಂಜನೆಯನ್ನು ನೀಡುತ್ತದೆ. ಒಂದು ಸಂಸ್ಕೃತಿಯ ಸಮಕಾಲೀನ ಸಮಾಜದ ಚಿತ್ರಣದಲ್ಲಿ ತೊಡಗಿದಾಗ ಸಾಧ್ಯವಿದ್ದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಅವುಗಳ ಮುಖ ಆಯಾಮುಗಳನ್ನು ತಮ್ಮ ಕವನಗಳಲ್ಲಿ ಹಿಡಿದುಕೊಳ್ಳಲು ಯತ್ನಿಸುವ ಇವರಿಬ್ಬರಲ್ಲೂ ಕಂಡು ಬರುವ ವಿಷಯ ವೈವಿಧ್ಯ ಮತ್ತು ವೈಚಾರಿಕ ಸಾಮರಸ್ಯ ಇವರೊಂದಿಗೆ ಬರೆಯುತ್ತಿರುವ ಬಹುತೇಕ ಕವಿಗಳಲ್ಲಿ ಇಲ್ಲ. ಈ ಕಾರಣದಿಂದಲೇ ಇವರನ್ನು ಜಾತಿ ಅಥವಾ ಪಂಗಡಗಳ ಹೆಸರಿನಿಂದ ಒಂದು ಗುಂಪಾಗಿ ಮಾಡಿ ಅವಹೇಳನೆ ಮಾಡುವ ಕುತಂತ್ರ ಇದುವರೆಗಿನ ವಿಮರ್ಶೆಯ ಹಿಂದೆ ನಡೆದಿದೆ. ಆದರೆ ಶಿವರುದ್ರಪ್ಪ ಮಾತ್ರ ಇದಾವುದಕ್ಕೂ ಸೊಪ್ಪು ಹಾಕದೇ ವಿನಯ ತುಂಬಿದ ಒಂಟಿ ಸಲಗನಂತೆ ಮುಂದೆ ಮುಂದೆಯೇ ಸಾಗಿದ್ದಾರೆ. ಹೀಗಾಗಿ ಕಣವಿಯುವರದು ಆದರ್ಶ ಮತ್ತು ಕಲ್ಪನೆಯ ಪಕ್ವ ಕಲೆಗಾರಿಕೆಯ ಕಾವ್ಯವಾಗುತ್ತದೆ. ಶಿವರುದ್ರಪ್ಪನವರದು ಹೆಚ್ಚು ವಾಸ್ತವದ, ಜೀವನೋತ್ಸಾಹದ ಪ್ರೀತಿ ತುಂಬಿದ ಸ್ಥಿತಿ–ಸ್ವೀಕೃತಿಯ ಪ್ರಕೃತ ಕಾವ್ಯವಾಗುತ್ತದೆ. ತಮ್ಮ ಕಾವ್ಯ–ರಥದಪಥ–ಸಂಚಲನಕ್ಕಾಗಿ ಸಪಾಟಾದ ಆತಂಕ ರಹಿತ ಮಾರ್ಗವನ್ನು ನಿರ್ಮಿಸಿಕೊಂಡು ಕಣವಿ ಮುಂದೆ ಸಾಗುತ್ತಾರೆ. ಆದರೆ ಸಪಾಟಾದ ನೆಲದ ಮೇಲೆಯೂ ಅತ್ತ ಇತ್ತ ಸುತ್ತ ಮುತ್ತ

ತಿರುಗುತ್ತ ಅಡ್ಡಾದಿಡ್ಡಿ ಸಹಜವಾಗಿ ನಡೆಯುವ ಬಂಡಿಯು ಓಟದಂತೆ ಶಿವರುದ್ರಪ್ಪನವರದು.

ನಿಂತಲ್ಲೆ ನಿಂತು ಪಾಚಿಗಟ್ಟುತ್ತಿರುವ ನೀರಲ್ಲಿ
ಈಜಬಹುದೇ ಹೇಳಿ ಯಾರಾದರೂ ?

ಎಂದು ಪ್ರಶ್ನಿಸುತ್ತ

ಕಾಳ ರಾತ್ರಿಗಳಲ್ಲಿ ಬಂದು ಕದ ತಟ್ಟುವ
ಧ್ವನಿಗಳನ್ನು ಕುರಿತು

ಮತ್ತು 'ಅರಳುವ ಕನಸು', 'ಉರುಳುವ ಚಕ್ರ'ಗಳನ್ನು ಕುರಿತುಬರೆಯುವದರೊಂದಿಗೆ

ನಾನು ಬರೆಯುತ್ತೇನೆ, ನನ್ನ
ಒಂದೊಂದೇ ಎಲೆಯುದುರಿ
ನಾನು ಬೋಳಾಗುವುದನ್ನು ಕುರಿತು

ಎಂದು ಶಿವರುದ್ರಪ್ಪ ತಳಮಳಗೊಳ್ಳುತ್ತಾರೆ.

ಕಣವಿಯವರದು 'ಮೊದಲ ಮಳೆ ಬಿದ್ದೊಡನೆ' 'ಬಣ್ಣ ಬಣ್ಣದ ಛತ್ರಿ' ಬಿಚ್ಚುವ ಜರ್ಬರಾ ಹೂವಿನಂತೆ ಎದ್ದು ನಿಂತು ಮತ್ತೆ ನೆಲ–ಮುಗಿಲುಗಳನ್ನು ಬಿರುಗಣ್ಣುಗಳಿಂದ ನೋಡುತ್ತ ನಿಲ್ಲುವ ಕುತೂಹಲದ ಕಾವ್ಯ.

ಇವರಿಬ್ಬರ ಸೃಜನಶೀಲತೆಯನ್ನು ಶುದ್ಧ, ಪ್ರಾಮಾಣಿಕ, ಸಹಜ, ನಿರರ್ಗಳ ಕಾವ್ಯದ ಪಾತಳಲ್ಲಿಯೇ ವಿಮರ್ಶಿಸಬೇಕು. ಆಗ ಇಬ್ಬರೂ ಶುದ್ಧ ನವೋದಯ ಅಥವಾ ಕೇವಲ ನವ್ಯ ಇಲ್ಲವೆ ಪೂರ್ಣ ಬಂಡಾಯದವರಿಗಿಂತ ಭಿನ್ನವಾಗಿ. ಎತ್ತರದವರಾಗಿ, ವಿಶಿಷ್ಟವಾಗಿ ಕಾಣುತ್ತಾರೆ. ಈ ವಿಶಿಷ್ಟ ಕಾವ್ಯ ವ್ಯಕ್ತಿತ್ವವೇ ಇಂದು ಹೊಸದಾಗಿ ಬರೆಯುತ್ತಿರುವ ಅನೇಕ ಸತ್ವಶಾಲಿ ಹೊಸಬರಿಗೂ ಒಂದು ಆಹ್ವಾನವಾಗುವುದರಲ್ಲಿ ಸಂಶಯವಿಲ್ಲ. ಒಂದೊಂದು ನಿಶ್ಚಿತ ಕಾವ್ಯ ಪರಂಪರೆಯೊಂದಿಗೆ ಹೊಂದುವ ಮನಸ್ಸಿದ್ದರೂ ಕಾಲಧರ್ಮದ ಪರಿಣಾಮವಾಗಿ ಹೊಂದದೇ ಉಳಿದ ಕಣವಿ, ಹಾಗೆ ಹೊಂದುವ ಮನಸ್ಸನ್ನೇ ಹೊಂದದೆ ವಿಶಿಷ್ಟವಾಗಿ ಉಳಿದ ಶಿವರುದ್ರಪ್ಪ ಇಬ್ಬರೂ ಕೊನೆಯಲ್ಲಿ ತಮಗರಿವಾಗದಂತೆಯೇ ತಲುಪಿರುವುದು ಒಂದು ಶ್ರೇಷ್ಠ, ಶುದ್ಧ ಕಾವ್ಯದ ಗುರಿಯನ್ನು. ಈಗ ಬರೆಯುತ್ತಿರುವ ಅನೇಕರಿಗೆ ಮುಂಬರುವ ವರ್ಷಗಳಲ್ಲಿ ಈ ಇಬ್ಬರು ಕವಿಗಳ ಇಂಥ ಕಾವ್ಯ ರಚನೆ ಒಂದು ಆಶ್ಚರ್ಯಕಾರಕ ಸತ್ಯವಾಗುತ್ತದೆ ಎಂದು ನಾನು ಭಾವಿಸಿದ್ದೇನೆ.

— ● —

# ಕಾವ್ಯಭಾಷೆ

---

ಬಸವರಾಜ ಸಬರದ

ಜಿ. ಎಸ್. ಶಿವರುದ್ರಪ್ಪ ಹಾಗೂ ಚೆನ್ನವೀರ ಕಣವಿ ಇವರು ಕನ್ನಡದ ಅರ್ಥಪೂರ್ಣ ಕವಿಗಳು. ಸಮಕಾಲೀನ ಸ್ನೇಹಜೀವಿಗಳಾದ ಇವರೀರ್ವರು ಕನ್ನಡದ ಸಮನ್ವಯ ಕವಿಗಳೆಂದೇ ಪ್ರಸಿದ್ಧರಾಗಿದ್ದಾರೆ. ಇವರೀರ್ವರೂ ಕನ್ನಡ ಕಾವ್ಯದ ಪ್ರಮುಖ ಘಟ್ಟಗಳಾದ ನವೋದಯ, ನವ್ಯ, ದಲಿತ, ಬಂಡಾಯದ ಸಂದರ್ಭಗಳಲ್ಲಿಯೇ ಕಾವ್ಯ ರಚಿಸಿದರೂ ಯಾವುದೇ ಒಂದು ಚಳವಳಿಗೆ ಬದ್ಧರಾಗದೆ, ಯಾವುದೇ ಒಂದು ಘಟ್ಟದಲ್ಲಿ ಸ್ಥಗಿತಗೊಳ್ಳದೆ ನಿರಂತರವಾಗಿ ಬರಹದೊಂದಿಗೆ ಬದುಕನ್ನು ಹುಡುಕುತ್ತ ಬಂದವರು. ಕಾವ್ಯದ ರೂಪದ ದೃಷ್ಟಿಯಿಂದ ನವೋದಯದ ಸಂದರ್ಭದಲ್ಲಿ ಭಾವಗೀತೆಗಳನ್ನು, ನವ್ಯದ ಸಂದರ್ಭದಲ್ಲಿ ನವ್ಯ ಕವಿತೆಗಳನ್ನು ರಚಿಸಿರುವ ಈ ಕವಿದ್ವಯರು ಪ್ರಸ್ತುತ ದಲಿತ ಬಂಡಾಯದ ಸಂದರ್ಭದಲ್ಲಿಯೂ ಕಾವ್ಯದ ತಾಜಾತನವನ್ನು ಉಳಿಸಿಕೊಂಡವರು.

ಭಾವಗೀತೆಗೆ ಜಿ. ಎಸ್. ಎಸ್. ಮಾತುಗಾರಿಕೆಯ ಲಯವನ್ನು ಕೊಟ್ಟರೆ, ಕಣವಿ ಉತ್ತರ ಕರ್ನಾಟಕದ ಆಡುಮಾತಿನ ಸೊಗಡನ್ನು ತೊಡಿಸಿದರು. ಇವರಿಬ್ಬರ ಕವಿತೆಗಳು ಎಲ್ಲಿಯೂ ಗೊತ್ತುವಳಿಗಳ ಹಾಗೆ, ಪ್ರಣಾಳಿಕೆಗಳ ಹಾಗೆ, ಸೈದ್ಧಾಂತಿಕ ವರದಿಗಳ ಹಾಗೆ ಇರದೇ ಇರುವದೇ ಈ ಕವಿಗಳ ವೈಶಿಷ್ಟ್ಯವಾಗಿದೆ.

ಜಿ. ಎಸ್. ಎಸ್. ಕವಿತೆಗಳಲ್ಲಿ ಕುತೂಹಲವಿದ್ದರೆ, ಕಣವಿಯವರ ಕವಿತೆಗಳಲ್ಲಿ ಚುರುಕುತನವಿದೆ. ಕಲಾತ್ಮಕತೆಯ ವಿಚಾರ ಬಂದಾಗ ಇಬ್ಬರ ಕವಿತೆಗಳೂ ಗಮನ ಸೆಳೆಯುತ್ತವೆ.

ಪ್ರಕೃತಿ, ಬದುಕು, ಪ್ರೀತಿ, ಪ್ರೇಮ, ನೋವು, ನಲಿವು ಇಂತಹ ಅನೇಕ ವಿಷಯುಗಳನ್ನು ಅಭಿವ್ಯಕ್ತಿಸುವಾಗ, ಬದುಕಿನ ವಿವಿಧ ಅನುಭವಗಳನ್ನು ಕಟ್ಟಿಕೊಡುವಾಗ ಇವರಿಬ್ಬರೂ ಭಾಷೆಯ ದೃಷ್ಟಿಯಿಂದ ಬಹಳಷ್ಟು ಗಮನ ಸೆಳೆಯುತ್ತಾರೆ. ಇವರ ಕಾವ್ಯಭಾಷೆಯಲ್ಲಿ ಸೆಡವು ಇರದೆ ಸೊಗಡು ಇದೆ; ವಾಚ್ಯವಿರದೆ ಧ್ವನಿಯಿದೆ, ನೀರಸತೆಯಿರದೆ ತೀವ್ರತೆಯಿದೆ. ಕನ್ನಡ ಕಾವ್ಯಕ್ಕೆ ಇವರೀರ್ವರಿಂದಲೂ ಗಮನಾರ್ಹ ಕೊಡುಗೆ ಸಂದಿದೆ. ಇವರೀರ್ವರ ಸಮನ್ವಯ ದೃಷ್ಟಿ ಮೂರು ವಿಧದಲ್ಲಿ ನಡೆದಿದೆ. ಕಾವ್ಯ–ವಿಮರ್ಶೆಯಲ್ಲಿ ಸಮನ್ವಯ, ನವೋದಯ– ನವ್ಯ ಘಟ್ಟಗಳಲ್ಲಿಯ ಸಮನ್ವಯ, ಆದರ್ಶ– ವಾಸ್ತವಗಳಲ್ಲಿಯ ಸಮನ್ವಯ–ಹೀಗೆ ಸಮನ್ವಯದಲ್ಲಿಯ ವೈಶಿಷ್ಟ್ಯ ಇವರದು.

ಕಾವ್ಯಭಾಷೆಯ ದೃಷ್ಟಿಯಿಂದಂತೂ ಇವರಿಬ್ಬರೂ ಸಮನ್ವಯವನ್ನು ಸಾಧಿಸಿದ್ದಾರೆ. ಆಡು ಮಾತುಗಳನ್ನು ಬಿಟ್ಟುಕೊಡದೆ, ಸಂಸ್ಕೃತ ಪದಗಳನ್ನು ಸಂಪೂರ್ಣ ತ್ಯಜಿಸದೆ, ಇತ್ತ ಗ್ರಾಂಥಿಕವಾಗಿರುವ, ಅತ್ತ ಸಹಜತೆಯಿಂದ ಮಿಡಿಯುವ; ಗದ್ಯದಲ್ಲಿ ಪದ್ಯದ ಲಯವನ್ನು, ಪದ್ಯದಲ್ಲಿ ಗದ್ಯದ ಸೊಗಡನ್ನು ಮುಡಿದು ನಿಂತಿರುವ ಇವರ ಕಾವ್ಯ ನಿಜಕ್ಕೂ ಸಮನ್ವಯತೆಯನ್ನು ಭಾಷೆಯ ದೃಷ್ಟಿಯಿಂದ ಸಾಧಿಸಿದೆ. ವಸ್ತು, ಆಶಯದ ದೃಷ್ಟಿಯಿಂದಲೂ ಇವರನ್ನು ಸಮನ್ವಯ ಕವಿಗಳೆಂದೇ ಕರೆಯುತ್ತಾರೆ. ಭಾವಗೀತೆಗಳನ್ನು ರಚಿಸಿ ಇವರ ಶೈಲಿ ನವೋದಯಕ್ಕೆ ಹದಗೊಳ್ಳುತ್ತಿರುವಾಗಲೇ, ನವ್ಯಕವಿತೆಗಳನ್ನು ರಚಿಸಿರುತ್ತಾರೆ; ನವ್ಯಕವಿಗಳೆಂದು ಕರೆಯಬೇಕೆನ್ನುವಷ್ಟರಲ್ಲಿ ಬಂಡಾಯದ ಆಶಯುಗಳನ್ನು ಹೊತ್ತು ಕೊಂಡು ಕೆಲ ಕವಿತೆಗಳು ಪ್ರಕಟವಾಗಿರುತ್ತವೆ. ಬದುಕಿನ ಹುಡುಕಾಟದಲ್ಲಿ ನಿರಂತರವಾದ ತೀವ್ರತೆಯನ್ನುಳಿಸಿಕೊಂಡು ಬಂದಿರುವ ಇವರಿಬ್ಬರ ಕವಿಗಳ ಯಶಸ್ಸಿನ ಗುಟ್ಟು ಕೂಡಾ ಇದೇ ಆಗಿದೆ.

ಇವರಿಬ್ಬರಲ್ಲಿ ವಸ್ತು–ಶೈಲಿಯ ದೃಷ್ಟಿಯಿಂದ ಯಾವುದೇ ಸಿದ್ಧಗೊಳಿಸಿದ ಚೌಕಟ್ಟಿಲ್ಲ. ಆಶಯದ ದೃಷ್ಟಿಯಿಂದಾಗಲಿ, ಭಾಷೆಯ ದೃಷ್ಟಿಯಿಂದಾಗಲಿ ಇವರನ್ನು ಯಾವುದೇ ಚೌಕಟ್ಟಿನಲ್ಲಿ ಕೂಡಿಸುವದಕ್ಕೂ ಆಗುವದಿಲ್ಲ. ಹೀಗೆಂದಾಕ್ಷಣ ಇವರಿಗೆ ಆಯಾ ಕಾವ್ಯ ಸಂದರ್ಭದ ಜವಾಬ್ದಾರಿಗಳಿಲ್ಲವೆಂದರ್ಥವಲ್ಲ. ಇವರು ನವೋದಯದ ಸಂದರ್ಭದಲ್ಲಿ ಭಾವಗೀತೆಯನ್ನೇ ಬರೆದಿರಲಿ, ನವ್ಯದ ವೇಳೆಯಲ್ಲಿ

ನವ್ಯಕವಿತೆಯನ್ನೇ ರಚಿಸಿರಲಿ, ದಲಿತ ಬಂಡಾಯದ ಇಂದಿನ ಸಂದರ್ಭದಲ್ಲಿ ಅಂತ ಹದೇ ಆಶಯವನ್ನು ಕೊಟ್ಟಿರಲಿ ಅವೆಲ್ಲವೂ ಕವಿತೆಗಳಾಗಿವೆ. ಅವರಿಬ್ಬರ ರಚನೆ ಯೆಲ್ಲಾ ಕಾವ್ಯವಾಗಿದೆ. ಹೀಗಾಗಿ ಇವರು ಮೂರೂ ಘಟ್ಟದ ಕವಿಗಳ–ವಿಮರ್ಶ ಕರ–ಓದುಗರ ಪ್ರೀತಿಗೆ ಪಾತ್ರರಾಗಿದ್ದಾರೆ. ಅಂತ್ಯಪ್ರಾಸದಿಂದ ನಳನಳಿಸುವ ಇವರ ಭಾವಗೀತೆಗಳು, ಪ್ರತಿಮೆ, ಸಂಕೇತಗಳನ್ನು ಕಟ್ಟಿಕೊಂಡು ಕುಣಿಯುವ ಇವರ ನವ್ಯ ಕವಿತೆಗಳು, ಬಂಡಾಯದ ಆಶಯವನ್ನು ಹೊತ್ತು ನಿಂತಿರುವ ಇತ್ತೀಚಿನ ಕವಿತೆ ಗಳು ಅವರ ಬೆಳವಣಿಗೆಯ ವೈವಿಧ್ಯವನ್ನು ಹೇಳುತ್ತವೆ.

ಕಣವಿಯವರ ಮೊದಲ ಕವನ ಸಂಕಲನ 'ಕಾವ್ಯಾಕ್ಷಿ' ೧೯೪೯ರಲ್ಲಿ ಪ್ರಕಟ ವಾದರೆ, ಜಿ. ಎಸ್. ಎಸ್. ಅವರ ಮೊದಲ ಕವನ ಸಂಕಲನ 'ಸಾಮಗಾನ' ೧೯೫೧ ರಲ್ಲಿ ಪ್ರಕಟವಾಯಿತು. ೧೯೮೯ರಲ್ಲಿ ಪ್ರಕಟವಾದ ಕಣವಿಯವರ 'ಜೀನಿಯಾ' ಕವನ ಸಂಕಲನ ಇತ್ತೀಚಿನ ಕೃತಿಯಾದರೆ, ೧೯೮೮ ರಲ್ಲಿ ಬಂದ 'ಪ್ರೀತಿ ಇಲ್ಲದ ಮೇಲೆ' ಜಿ. ಎಸ್. ಎಸ್. ಅವರ ಇತ್ತೀಚಿನ ಕವನ ಸಂಕಲನವಾಗಿದೆ. 'ಕಾವ್ಯಾಕ್ಷಿ' ಯಿಂದ 'ಜೀನಿಯಾ' ಕೃತಿಯ ವರೆಗೆ, ನಾಲ್ಕು ದಶಕಗಳ ಅವಧಿಯ ಕಾವ್ಯಕೃಷಿ ಕಣವಿಯವರಿಗಿದೆ. ಹಾಗೆಯೇ 'ಸಾಮಗಾನ'ದಿಂದ 'ಪ್ರೀತಿ ಇಲ್ಲದ ಮೇಲೆ' ಕವನ ಸಂಕಲನದ ವರೆಗೆ ನಾಲ್ಕು ದಶಕಗಳ ಸಮೀಪದ ಅವಧಿಯ ಸಾಹಿತ್ಯಕೃಷಿ ಜಿ. ಎಸ್. ಎಸ್. ಅವರದಾಗಿದೆ. ಈ ನಾಲ್ಕು ದಶಕಗಳ ಅವಧಿಯಲ್ಲಿ ಈ ಇಬ್ಬರೂ ಕವಿಗಳಲ್ಲಾದ ತೀವ್ರತರವಾದ ಬದಲಾವಣೆಗಳು ಬೆಳವಣಿಗೆಗಳು ಇವರ ಕಾವ್ಯದಲ್ಲಿ ಕಾಣಿಸಿಕೊಂಡಿವೆ. ಇಬ್ಬರೂ ಕವಿಗಳು ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿ, ರಾಜ್ಯೋತ್ಸವ ಪ್ರಶಸ್ತಿ ಹೀಗೆ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಸ್ನೇಹಕಾರ್ತಿಕ [೧೯೭೭] ಹಾಗೂ ಚೆಂಬೆಳಕು [೧೯೮೦] ಜಿ. ಎಸ್. ಎಸ್. ಹಾಗೂ ಕಣವಿಯವರಿಗೆ ಅರ್ಪಿಸಿದ ಅಭಿನಂದನಾ ಗ್ರಂಥಗಳಾಗಿವೆ. ಇಬ್ಬರೂ ಕವಿಗಳ ಸಮಗ್ರಕಾವ್ಯ ಈಗಾಗಲೇ ಪ್ರಕಟವಾಗಿವೆ. ಸಮಾನ ವಯಸ್ಸಿನ ಸಮಾನ ಮನಸ್ಸಿನ ಸ್ನೇಹಜೀವಿಗಳಾಗಿರುವ ಈ ಇಬ್ಬರೂ ಕವಿಗಳು ಕನ್ನಡ ಕಾವ್ಯಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಕೊಟ್ಟಿದ್ದಾರೆ.

ಇವರಿಬ್ಬರು ಕವಿಗಳ ಕಾವ್ಯಭಾಷೆಯನ್ನು ತೌಲನಿಕವಾಗಿ ನೋಡುತ್ತ ಅವರ ವೈಶಿಷ್ಟ್ಯತೆಯನ್ನು ಗುರುತಿಸುವದು ಈ ಲೇಖನದ ಪ್ರಾಮಾಣಿಕ ಪ್ರಯತ್ನವಾಗಿದೆ. ಹಿತಮಿತ ನುಡಿಗಟ್ಟುಗಳ ಬಳಕೆ,ನವುರಾದ ಶೈಲಿ ಈ ಕವಿದ್ವಯರ ವೈಶಿಷ್ಟ್ಯವಾಗಿದೆ. ಉತ್ತರ ಕರ್ನಾಟಕದ ಆಡುಮಾತಿನ ಸೊಗಡನ್ನು ಅರ್ಥಪೂರ್ಣವಾಗಿ ದುಡಿಸಿ ಕೊಂಡ ಬೇಂದ್ರೆಯವರ ಪ್ರಭಾವ ಕಣವಿಯರ ಪ್ರಾರಂಭದ ಕವಿತೆಗಳ ಮೇಲಾದರೆ, ಮಲೆನಾಡಿನ ಸಂಭ್ರಮವನ್ನು ಕಾವ್ಯದಲ್ಲಿ ಪೋಣಿಸಿದ ಕುವೆಂಪು ಅವರ ಪ್ರಭಾವ

ಜಿ. ಎಸ್. ಎಸ್, ಅವರ ಪ್ರಾರಂಭದ ಕವಿತೆಗಳ ಮೇಲೆ ದಟ್ಟವಾಗಿದೆ. ಇವರಿಬ್ಬರೂ ಕವಿಗಳು ನಂತರದ ಬೆಳವಣಿಗೆಯಲ್ಲಿ ಪ್ರಭಾವವನ್ನು ಬಿಡಿಸಿಕೊಂಡು, ಸ್ವತಂತ್ರವಾಗಿ ಬೆಳೆದು ನಿಂತದ್ದು ಅವರ ಸೃಜನಶೀಲ ಪ್ರತಿಭೆಗೆ ಸಾಕ್ಷಿಯಂತಿದೆ.

**ಆಲಂಕಾರಿಕ ಭಾಷೆ :**

ಭಾವಗೀತೆಗಳಲ್ಲಿ ಆಲಂಕಾರಿಕ ಭಾಷೆ ವಿಜೃಂಭಿಸಿದೆ. ಸೃಷ್ಟಿಯಲ್ಲಿರುವ ಸಂಭ್ರಮವಾಗಿರಲಿ, ಪ್ರಕೃತಿಯ ವರ್ಣನೆಯಾಗಿರಲಿ, ಪ್ರೀತಿ ಪ್ರೇಮದ ಆಕರ್ಷಣೆಯಾಗಿರಲಿ, ವ್ಯಕ್ತಿಚಿತ್ರಣದ ತೀವ್ರತೆಯಾಗಿರಲಿ ಅಲ್ಲೆಲ್ಲಾ ಈ ಕವಿಗಳು ಅನೇಕ ಅಲಂಕಾರಗಳನ್ನು, ಪ್ರತಿಮೆ ಸಂಕೇತಗಳನ್ನು ಬಳಸಿ, ಭಾಷೆಯ ಸಾಧ್ಯತೆಗಳನ್ನು ಸಮರ್ಪಕವಾಗಿ ದುಡಿಸಿಕೊಂಡಿದ್ದಾರೆ.

ಮನೆಗಳಲ್ಲಿ ಮಹಡಿ ಮನೆ ಹೇಗೋ ಹಾಗೆ
ಮರಗಳಲ್ಲಿ ಇದು ಮಹಡಿ ಮರ
ಉದ್ದನೆಯ ಮೊರಡು ದಿಂಡಿನ ಒಳಗೆ
ಮೇಲಕ್ಕೆ ನೀರೇರಿಸುವ ಪಂಪು ಕಾಣದು ನಮಗೆ

[ಜಿ. ಎಸ್ ಎಸ್.–'ತೆಂಗು'–ನನ್ನ ನಿನ್ನ ನಡುವೆ]

ಕಣ್ಣೆದಿರು ಕನಕಾಂಗಿ ಮುಗಿಲು ಕಪ್ಪುರಗೊಂಬೆ
ಚಿಕ್ಕ ಲೋಕವ ತೆರೆದು ಅಕ್ಕರತೆ ಬೀರುತಿಹ ಸ್ವಚ್ಛ ಆಕಾಶ
ಹಚ್ಚೆಯ ಚುಚ್ಚಿದಂತೆ ನೆಲದೊಳಚ್ಚೊತ್ತಿರುವ ಹಸುರ ಕುಸುರು
ದಿಗಂತದಲಿ ಕೆಳಗೆ ಇಳಿಬಿಟ್ಟಿರುವ ಗಿರಿಸಾಲುಗಳ ನೀಲತೆರೆ

[ಕಣವಿ 'ಶಿಶು ಕಂಡ ಕನಸು'–ಮಣ್ಣಿನ ಮೆರವಣಿಗೆ]

ಇವೆರಡೂ ಕವಿತೆಗಳಲ್ಲಿ ಪ್ರಯೋಗವಾಗಿರುವ ಉಪಮಾಲಂಕಾರಗಳು ಪ್ರಕೃತಿಯ ಐಸಿರಿಯನ್ನು ಪರಿಣಾಮಕಾರಿಯಾಗಿ ಹಿಡಿದಿಡುತ್ತವೆ. ಆಡುಮಾತುಗಳ ಮುಖಾಂತರವೇ ಜಿ. ಎಸ್. ಎಸ್. ಅಲಂಕಾರಗಳನ್ನು ಪೋಣಿಸಿದರೆ ಕಣವಿಯವರ ಅಲಂಕಾರಗಳು ಕನ್ನಡ ಕಾವ್ಯಕ್ಕೇ ವಿಶಿಷ್ಟವಾಗುತ್ತ ಹೊಸ ಹೊಸ ರೂಪಗಳನ್ನು ಪಡೆದುಕೊಳ್ಳುತ್ತವೆ. ಮನೆಗಳಲ್ಲಿ ಮಹಡಿಮನೆ ಹಾಗೆ ಮರಗಳಲ್ಲಿ ಮಹಡಿ ಮರ ಎಂದಷ್ಟೇ ಹೇಳಿದ್ದರೆ ಅದೊಂದು ಉಪಮಾಲಂಕಾರವಾಗಿ ಮಾತ್ರ ಉಳಿಯುಬಹುದಿತ್ತು. ಆದರೆ ಕವಿ ಇಲ್ಲಿ ಇನ್ನೂ ಅನೇಕ ಮಹತ್ವದ ಅರ್ಥಗಳನ್ನು ಧ್ವನಿಸುವದರಿಂದ ಈ ಕವಿತೆಯ ಪ್ರಾಮುಖ್ಯತೆ ಇನ್ನೂ ಹೆಚ್ಚಾಗುತ್ತಾ ಹೋಗುತ್ತದೆ.

'ನೆಲಕ್ಕೂ ಇದಕ್ಕೂ ವ್ಯವಹಾರ ಬಲುದೂರ' ಎಂದು ಹೇಳಿದಾಗ ಮಹಡಿ ಮಹಲುಗಳ ವಿಡಂಬನೆ ತೆಂಗಿನ ಮೂಲಕ ಪ್ರಾರಂಭವಾಗುತ್ತದೆ. ಇದನ್ನು ನೋಡಿದಾಕ್ಷಣ ಕ್ರಿಸ್ತ, ಬುದ್ಧ ನೆನಪಾಗುತ್ತಾರೆಂದಾಕ್ಷಣ ಸಂಗದೊಳಿದ್ದು ನಿಸ್ಸಂಗ ವಾಗುವ ಇವರ ವಿಶಿಷ್ಟತೆಯನ್ನು, ಏಕಾಂಗಿಯಾಗಿ ನೆಲದಿಂದ ದೂರ ಉಳಿಯುವ ಅವರ ಅಸಹಾಯಕತೆಯನ್ನು ಧ್ವನಿಸುವದರಿಂದ ಕವಿತೆಯ ಆಶಯ ಮತ್ತಷ್ಟು ಸಂಕೀರ್ಣವಾಗುತ್ತ ಹೋಗುತ್ತದೆ. ಅದರಂತೆ ಕಣವಿಯವರೂ ಕೂಡ ಅನೇಕ ಉಪಮೆಗಳ ಮೂಲಕ ಒಂದು ಸೊಗಸಾದ ಚಿತ್ರವನ್ನು ಕಟ್ಟಿಕೊಡುತ್ತಾರೆ. ನೆಲ ದಲ್ಲಿ ಅಚ್ಚೊತ್ತಿರುವ ಹಸಿರು ಅದರ ಕುಸುರು ಅವರಿಗೆ ಹಚ್ಚೆಯ ಗುರುತಾಗಿ ಕಾಣಿಸುವದು ಅವರ ವಿಶಿಷ್ಟವಾದ ಉಪಮೆಗೆ ಸಾಕ್ಷಿಯಂತಿದೆ. ಎತ್ತರವಾದ ಪರ್ವತದ ಸಾಲುಗಳಿಗೆ ಹತ್ತಿರವಾಗಿ ಕಾಣುವ ಆಕಾಶ ಅವರಿಗೆ ದಿಗಂತದಲಿ ಕೆಳಗೆ ಇಳಿಬಿಟ್ಟಿರುವ ನೀಲಿ ತೆರೆಯಾಗಿ ಕಾಣಿಸುತ್ತದೆ.

ಇವರಿಬ್ಬರೂ ಕವಿಗಳು ಇಲ್ಲಿ ಪ್ರಕೃತಿಯನ್ನು ಬದುಕಿನ ಮೂಲಕ ಕಾಣುತ್ತಾರೆ. ಮೇಲೆ ಕಾಣುವ ಮುಗಿಲನ್ನು ಕೆಳಗೆ ಹಾಸಿರುವ ನೆಲದ ಮೂಲಕ ನೋಡುತ್ತಾರೆ. ಹೀಗಾಗಿ ಇವರಲ್ಲಿ ನೆಲ ಮುಗಿಲಿನ ಸಂಬಂಧ, ಪ್ರಕೃತಿ ಬದುಕಿನ ಸಂಬಂಧವಾಗಿದೆ. 'ತೆಂಗಿನ ಕಾಂಡವಲ್ಲಿ ನಮಗೆ ಕಾಣದ ನೀರೇರಿಸುವ ಪಂಪು' ಹಾಗೂ 'ಕಣ್ಣೆದಿರು ಕನ ಕಾಂಗಿ ಮುಗಿಲು ಕಪ್ಪುರಗೊಂಬೆ' ಯಂತಹ ಕಲ್ಪನೆಗಳು ಓದುಗರಲ್ಲಿ ದಿಗ್ಭ್ರಮೆ ಯನ್ನುಂಟುಮಾಡುತ್ತವೆ. ನೆಲದಿಂದಲೇ ಹೊರಟ ತೆಂಗು ತನ್ನ ಗೊನೆಗಳಿಂದ ನೆಲವನ್ನೇ ಬೆರಗುಗೊಳಿಸಿದರೆ, ನೆಲದಿಂದಲೇ ಬೆಳೆದು ನಿಂತ ಪರ್ವತಕ್ಕೆ ಆಕಾಶ ನೀಲಿ ತೆರೆಯಾಗಿ ಕಂಗೊಳಿಸುತ್ತದೆ.

ಜಿ. ಎಸ್. ಎಸ್. ಮತ್ತು ಕಣವಿಯವರು ತಮ್ಮ ಕಾವ್ಯದಲ್ಲಿ ಕೇವಲ ಅಲಂಕಾರಕ್ಕಾಗಿ ಅಲಂಕಾರಗಳನ್ನು ಬಳಸಿದವರಲ್ಲ. ಇವರ ಆಲಂಕಾರಿಕ ಭಾಷೆ ಎಲ್ಲಿಯೂ ಕೃತ್ರಿಮವಾಗಿ ಕಾಣುವದಿಲ್ಲ. ಮುಗಿಲಿನ ವೈಭವವನ್ನು ನೆಲದ ಮೂಲಕ, ಇಹದ ಸಂಭ್ರಮವನ್ನು ಸೃಷ್ಟಿ ಕ್ರಿಯೆಗಳ ಮೂಲಕ ಎತ್ತಿ ತೋರಿಸುವ ಈ ಕವಿಗಳ ಆಲಂಕಾರಿಕ ನುಡಿಗಟ್ಟೇ ಕನ್ನಡಕ್ಕೆ ವಿಶಿಷ್ಟವಾಗಿ ಕಾಣುತ್ತದೆ.

ಶ್ರಾವಣಾ ಬಂತು ಶ್ರಾವಣಾ
ಇವಳು ಉಸಿರಾಡಿದರೆ ಹಸಿರು, ಮಾತಾಡಿದರೆ ಜುಳು ಜುಳು
ಹೆಜ್ಜೆ ಇಟ್ಟರೆ ಹೂವು, ತುರುಬಿನ ತುಂಬ ಮಲ್ಲಿಗೆ ಮೋಡ!'

[ಜಿ. ಎಸ್. ಎಸ್. : 'ಶಾರದೆ'–ನನ್ನ ನಿನ್ನ ನಡುವೆ]

ಕಣ್ಣು ನೀಲಾಂಜನ ಕರಗಿಸಿದ ನಕ್ಷತ್ರ
ಮೂಗು ಹಟವಾರಿತನಕೊಡೆದ ಮೊಗ್ಗು
ಗೋಣು ಹೊರಳಿಸಿ ಸೋಗುಮಾಡಿ ಕುಣಿವ ನವಿಲು

[ಕಣವಿ : 'ರಂಜನಾ'–ನೆಲಮುಗಿಲು]

ಮೇಲಿನ ಎರಡು ಕವಿತೆಗಳಲ್ಲಿ ಜಿ. ಎಸ್. ಎಸ್. ಶಾರದೆಯನ್ನು ಆಲಂಕಾರಿನ ಭಾಷೆಯಲ್ಲಿ ವರ್ಣಿಸಿದರೆ, ಕಣವಿ 'ರಂಜನಾ' ಕವಿತೆಯಲ್ಲಿ ಮಗಳ ಜೀವನೋತ್ಸಾಹವನ್ನು ಪುಟಿವ ಕಾರಂಜಿಯಂತೆ ಚಿತ್ರಿಸಿದ್ದಾರೆ. ಉಸಿರು ಹಸಿರಾಗುವದು, ಮಾತು ಜುಳು ಜುಳು ನಿನಾದವಾಗುವದು, ನಡಿಗೆ ಹೂವಾಗುವದು, ಮಲ್ಲಿಗೆ ಬಿಳಿಮೋಡವಾಗುವದು ಜಿ. ಎಸ್. ಎಸ್. ಅವರ ಅದ್ಭುತ ಕಲ್ಪನಾಶಕ್ತಿಗೆ ಹಿಡಿದ ಕನ್ನಡಿಯಾಗಿದೆ. ಅದರಂತೆ ಮಗಳ ಕಣ್ಣು ಕರಗಿಸಿದ ನಕ್ಷತ್ರದಂತೆ ಕಾಣುವದು, ಮೂಗು ಹಟವಾರಿತನಕೊಡೆದ ಮೊಗ್ಗಿನಂತೆ ಕಾಣುವದು, ಹೊರಳಾಡುವ ಗೋಣು ಕುಣಿವ ನವಿಲಾಗಿ ಕಾಣುವದು ಕಣವಿಯವರ ಸಂಭ್ರಮದ ಕಾವ್ಯಸೌಂದರ್ಯಕ್ಕೆ ಸಾಕ್ಷಿಯಂತಿದೆ. ಶಾರದೆಯ ಸಂಭ್ರಮವನ್ನು ಜಿ.ಎಸ್.ಎಸ್, ಪ್ರಕೃತಿಯ ಸೊಬಗಿನ ಐಸಿರಿಯಲ್ಲಿ ಮೂಡಿಸಿದರೆ, ಮಗಳ ಉತ್ಸಾಹ ತೀವ್ರತೆಯನ್ನು ಕಣವಿ ಅದೇ ಪ್ರಕೃತಿಯ ಕ್ರಿಯೆಗಳ ಮೂಲಕ ಕಟ್ಟಿ ಕೊಡುತ್ತಾರೆ.

ಇಲ್ಲ ಬಳುವಳಿಯ ರಥ ಬರುವ ಬಣ್ಣದ ಕನಸು
ಬೇಡ ಆಮಂತ್ರಣದ ವಾದ್ಯಘೋಷ
ನೀನು ನನ್ನವನೆಂದು ತಂಗಾಳಿ ತಡವಿದರೆ
ಹೂ ಸುರಿದು ನಿಲ್ಲುವುದು ಪಾರಿಜಾತ!

[ಜಿ. ಎಸ್. ಎಸ್ : 'ನಿನ್ನ ಪ್ರೀತಿ'–ನನ್ನ ನಿನ್ನ ನಡುವೆ]

ಮುಂಜಾವದಲಿ ಹಸಿರು ಹುಲ್ಲ ಮಕಮಲ್ಲಿನಲಿ
ಪಾರಿಜಾತವು ಹೂವು ಸುರಿಸಿದಂತೆ
ಮುಟ್ಟಿದರೆ ಮಾಸುತಿಹ ಮಂಜು ಹನಿ ಮುತ್ತಿನಲಿ
ಸೃಷ್ಟಿ ಸಂಪೂರ್ಣತೆಯ ಬಿಂಬಿದಂತೆ

[ಕಣವಿ : 'ಮಾತು'–ಆಕಾಶಬುಟ್ಟಿ]

ಈ ಪಾರಿಜಾತ ಹೂವು ಇಬ್ಬರ ಕವಿತೆಗಳಲ್ಲಿಯೂ ಅರಳಿ ನಿಲ್ಲುತ್ತದೆ. ಅದು ಉಂಟುಮಾಡುವ ಪರಿಮಳ ಮಾತ್ರ ತುಂಬಾ ವೈವಿಧ್ಯಮಯವಾಗಿದೆ. ಕಾವ್ಯ

ಕಲೆಯಾಗಿ ಅರಳುವ ಪರಿ ಇದು. ಹೂ ಸುರಿದು ನಿಲ್ಲುವ ಪಾರಿಜಾತದ ಹಾಗೆ 'ನನ್ನ ಪ್ರೀತಿ' ಇರಬೇಕೆಂದ ಕವಿ ಜಿ. ಎಸ್. ಎಸ್. ಆಸೆ ಪಟ್ಟರೆ, ಸೃಷ್ಟಿ ಸಂಪೂರ್ಣತೆಯ ಬಿಂಬಿಸುವಂತೆ 'ಮಾತು' ಇರಬೇಕೆಂದು ಕಣವಿ ಹೇಳುತ್ತಾರೆ.

ಇವರಿಬ್ಬರೂ ಕಟೆದು ನಿಲ್ಲಿಸುವ ವ್ಯಕ್ತಿಚಿತ್ರಗಳಂತೂ ಜೀವ ತುಂಬಿಕೊಂಡು ಕುಣಿದಾಡುತ್ತವೆ. ಬುದ್ಧ, ಬಸವ, ಗಾಂಧಿ, ಶಾಸ್ತ್ರಿ, ಶರಣರು, ದಾಸರು ಇವರ ಕಾವ್ಯದಲ್ಲಿ ಮತ್ತೆ ಹುಟ್ಟಿ ಜೀವಂತವಾಗುತ್ತಾರೆ. ಅಲ್ಲಿಯ ಅಲಂಕಾರಗಳು ತೋಡಿಟ್ಟ ಒರತಿಯಂತೆ ಸಣ್ಣಗೆ ಹನಿಹನಿಯಾಗಿ ಹರಿದಾಡುತ್ತ ಕಾವ್ಯ ಬಿರಿದು ಅರಳುವಂತೆ ಮಾಡುತ್ತವೆ. ರವೀಂದ್ರರನ್ನು ಕುರಿತು ಜಿ. ಎಸ್. ಎಸ್. ಹಾಗೂ ಬೇಂದ್ರೆಯವರ ಬಗೆಗೆ ಕಣವಿ ಬರೆದಿರುವ ಒಂದೆರಡು ನುಡಿಗಳನ್ನು ಇಲ್ಲಿ ನೋಡಬಹುದು.

ಚಿಕ್ಕಗಣ್ಣಿನ ಕೆಳಗೆ ಬೆಳ್ಳಿಮೋಡದ ಗಡ್ಡ
ಅಲ್ಲಿಂದ ಇಲ್ಲಿನ ತನಕ ಬೆಳಕುಗಳ
ನಿಲುವಂಗಿ ತೊಟ್ಟು ನಿಂತವನು

[ ಜಿ.ಎಸ್.ಎಸ್.ಕವಿ ರವೀಂದ್ರರನ್ನು ಕುರಿತು : ನನ್ನ ನಿನ್ನ ನಡುವೆ ]

ಹಣ್ಣಾದ ಕೇದಿಗೆಯ ಹೊಡೆ
ಚೂಪಾದ ಗರಿ : ಹುಷಾರಿ, ಕಂಜಿಗೆಲ್ಲಿಯ ಕೊರತೆ
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

[ ಕಣವಿ— 'ಎಪ್ಪತ್ತರ ಬೇಂದ್ರೆ–ಎರಡು ದಡ' ]

ರವೀಂದ್ರನಾಥ ಠಾಕೂರರ ಭವ್ಯವ್ಯಕ್ತಿತ್ವವನ್ನು ಜಿ. ಎಸ್. ಎಸ್. ಒಂದು ಸಣ್ಣ ಕವಿತೆಯ ಮೂಲಕವೇ ಪರಿಣಾಮಕಾರಿಯಾಗಿ ತೋರಿಸಿದರೆ, ಅರ್ಥಪೂರ್ಣ ಉಪಮೆಗಳಿಂದ ಬೇಂದ್ರೆಯವರ ವ್ಯಕ್ತಿತ್ವವನ್ನು ಕಣವಿ ತಮ್ಮ ಕವಿತೆಯಲ್ಲಿ ಸಾರ್ಥಕವಾದ ರೀತಿಯಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಬರುವ ಚಿಕ್ಕಗಣ್ಣು–ಬೆಳ್ಳಿಮೋಡ ಹಾಗೂ ಹಣ್ಣಾದ ಕೇದಿಗೆ–ಚೂಪಾದ ಗರಿ ಇವು ಈ ಕವಿಗಳ ಭಾಷಾ ಶ್ರೀಮಂತಿಕೆಗೆ ಸಾಕ್ಷಿಯಾಗಿ ನಿಲ್ಲುತ್ತವೆ.

**ಆಡುನುಡಿ :**

ಜಿ. ಎಸ್. ಎಸ್. ಹಾಗೂ ಕಣವಿಯವರ ಕವಿತೆಗಳಲ್ಲಿ ಆಡುನುಡಿ ಉಸಿರಿನಷ್ಟು ಸಹಜವಾಗಿ ಬೆರೆತುಕೊಂಡಿದೆ. ಕಾವ್ಯ, ಭಾಷೆಯ ಕ್ರಿಯೆಯಲ್ಲಿ ಹೊರಹೊಮ್ಮುವ ಸೃಜನಶೀಲ ಸಾಹಿತ್ಯವಾಗಿರುವದರಿಂದ ಕಾವ್ಯದ ಭಾಷಿಕ ಅಧ್ಯಯನವೇ

ಒಂದು ಮಹಾಪ್ರಬಂಧದಷ್ಟು ದೊಡ್ಡದಾಗಬಹುದು. ಕಾವ್ಯದಲ್ಲಿ ವಸ್ತು, ವಿಷಯುಗಳಿಗಿಂತ ಭಾಷೆ-ಶೈಲಿಗೆ ಮಹತ್ವದ ಸ್ಥಾನವಿದೆ. ಈ ಇಬ್ಬರು ಕವಿಗಳು ಆ ದೃಷ್ಟಿಯಿಂದಲೂ ಗಮನ ಸೆಳೆಯುತ್ತಾರೆ. ಇವರ ಅಭಿವ್ಯಕ್ತಿ ವೈವಿಧ್ಯವಾದ ರೂಪಗಳಲ್ಲಿ, ಪರಿಣಾಮಕಾರಿಯಾದ ನುಡಿಗಟ್ಟುಗಳಲ್ಲಿ ಹರಳುಗಟ್ಟಿ ಪ್ರಕಾಶಿಸುವದನ್ನು ಕಾಣಬಹುದಾಗಿದೆ.

ಜಿ. ಎಸ್. ಎಸ್. ಅವರ ಸಾಮಗಾನ. ಚೆಲವು ಒಲವು, ದೇವಶಿಲ್ಪ, ದೀಪದ ಹೆಜ್ಜೆ, ಕಾರ್ತೀಕ, ತೀರ್ಥವಾಣಿ, ಅನಾವರಣ, ತೆರೆದದಾರಿ, ಗೋಡೆ, ನನ್ನನಿನ್ನ ನಡುವೆ, ಪ್ರೀತಿ ಇಲ್ಲದ ಮೇಲೆ— ಈ ಮೊದಲಾದ ಕವನ ಸಂಕಲನಗಳಲ್ಲಿ ಆಡುನುಡಿಯನ್ನು ಬಳಸುವ ರೀತಿ ವೈವಿಧ್ಯಮಯವಾಗಿದೆ. ಅದರಂತೆ ಕಣವಿಯವರ ಕಾವ್ಯಾಕ್ಷಿ, ಭಾವಜೀವಿ, ಆಕಾಶಬುಟ್ಟಿ, ಮಧುಚಂದ್ರ, ದೀಪಧಾರಿ, ಮಣ್ಣಿನ ಮೆರವಣಿಗೆ, ನೆಲಮುಗಿಲು, ಎರಡುದಡ, ನಗರದಲ್ಲಿ ನೆರಳು, ಚಿರಂತನದಾಹ, ಜೀನಿಯಾ ಈ ಮುಂತಾದ ಕವನ ಸಂಕಲನಗಳಲ್ಲಿ ಆಡುಮಾತಿನ ನುಡಿಗಟ್ಟುಗಳೊಂದಿಗೆ ಜಾನಪದ ಭಾಷೆಯ ಬಳಕೆಯೂ ಆಗಿದೆ. ಇವರಿಬ್ಬರ ಕಾವ್ಯದಲ್ಲಿ ಬರುವ ಆಡುಮಾತುಗಳು, ಮಧ್ಯಮವರ್ಗದ ನಗರಜೀವನದ ಜನತೆಯ ಭಾಷೆಯ ಪ್ರತೀಕಗಳಾಗಿವೆ. ಆದರೆ ಭಾಷೆಯ ತೀವ್ರತೆಯ ದೃಷ್ಟಿಯಿಂದ ಜಿ. ಎಸ್. ಎಸ್. ಅವರಿಗಿಂತ ಕಣವಿ ಹೆಚ್ಚು ಗಮನ ಸೆಳೆಯುತ್ತಾರೆ. ಸಾಮಾನ್ಯವಾಗಿ ಜಿ. ಎಸ್. ಎಸ್. ಅವರು ಕವಿತೆಯ ಆಶಯ-ಶಿಲ್ಪ-ಧೋರಣೆಗೆ ಮಹತ್ವದ ಸ್ಥಾನ ನೀಡಿದರೆ; ಕಣವಿ ಅದು ಅಭಿವ್ಯಕ್ತಿಗೊಳ್ಳುವ ಭಾಷೆ-ಶೈಲಿಯ ಕಡೆ ಹೆಚ್ಚು ಗಮನ ಕೊಡುತ್ತಾರೆ. ಹೀಗಾಗಿ ಭಾಷೆಯ ದೃಷ್ಟಿಯಿಂದ ಕಣವಿ ತಮ್ಮ ಕವಿತೆಗಳಲ್ಲಿ ವೈವಿಧ್ಯತೆಯನ್ನು ಸಾಧಿಸಿದ್ದಾರೆ.

ಜಿ. ಎಸ್. ಎಸ್. ಅವರ ಕವಿತೆಗಳಲ್ಲಿ ಬಿಡಬೇಡ, ಏಳು ಬಾಗಿಲ ತೆಗೆ, ಜುಳುಜುಳು, ಟೋಂಗೆಟಿಸಲು, ಕೊಂಬೆ-ರಂಬೆ, ಗಂಡನ ಮನೆ, ಜರಿಸೀರೆ, ಜೇಬು, ಕತ್ತರಿ, ಜಮಾ, ಲಗಾಮು, ಜೊಂಡು, ಕಡಿವಾಣ, ಸೌದೆ, ಪಾತ್ರೆ, ಕಸೂತಿ, ಛತ್ರಿ, ಬೀದಿನಾಯಿ, ಕಸಪೊರಕೆ ಇಂತಹ ಅನೇಕ ಆಡುನುಡಿಗಳು ಅರ್ಥಕ್ಕನುಗುಣವಾಗಿ ಬಳಕೆಯಾಗಿವೆ. ಕಣವಿಯವರ ಕವಿತೆಗಳಲ್ಲೂ ಇಂಥವುಗಳಿಗೆ ಕೊರತೆಯಿಲ್ಲ. ಚಕಚಕ, ಲಂಬಾಣಿ, ಕುಂಬಳಬಳ್ಳಿ, ಲಂಗ, ಅರ್ಜಂಟು, ಮೂಗುದಾರ, ಲಟಿಕೆ, ಲಾಳಿ, ತೊಳೆ, ಬಾರಿಸು, ಗುಮ್ಮನಗುಸಗ, ಖೀರು, ಪೆಪ್ಪರಮೆಂಟು. ಹುರಿಗಡ್ಲೆ, ಧೂಳಡರಿ, ಲಾಗಹೊಡಿ, ಬಡಿವಾರ, ಕಾಯಿಪಲ್ಯೆ, ಅಂತರ್ಲಾಗ ಜಂತರ್ಲಾಗ ಈ ಮೊದಲಾದ ಅನೇಕ ಆಡುನುಡಿಗಳು ಕಣವಿ ಅವರ ಕಾವ್ಯಭಾಷೆಯಲ್ಲಿ ಶೀರ ಸಹಜವಾಗಿವೆ.

ಹಿಡಿಕೋ, ಥಳಥಳ, ಹಂಡೆ, ಕಂಡಾಸಟ್ಟೆ, ರುಬ್ಬು, ಚಂದಮಾಮ, ನಿಗಿನಿಗಿ, ಹೆಗ್ಗಣ, ಬೂದಿ ಇಂತಹ ಕೆಲವೇ ಜಾನಪದ ನುಡಿಗಳು ಜಿ. ಎಸ್. ಎಸ್. ಅವರ ಕವಿತೆಗಳಲ್ಲಿ ಕಾಣಲು ಸಾಧ್ಯ. ಆದರೆ ಕಣವಿಯವರ ಕವಿತೆಗಳಲ್ಲಿ ಜಾನಪದ ನುಡಿಗಟ್ಟುಗಳು ಅಸಂಖ್ಯಾತವಾಗಿ ಬಳಕೆಯಾಗಿವೆ. ನಿಬ್ಬಣ, ಬೀಗರು, ತಾಂಡೆ, ಗಿಲ್‌ಗಿಲ್, ಚೆಲ್‌ಚೆಲ್, ಸುಡುಗಾಡಸಿದ್ಧ, ತತ್ರಾಣಿ, ಅಕ್ಕಡಿಬಳ್ಳಿ, ಬುತ್ತಿ, ಕೊಲ್ಲಾರಿಚಕ್ಕಡಿ, ತಿದಿ, ಇಬತ್ತಿ, ನತ್ತು. ಬುಗುಡಿ. ವಟವಟ, ಧೂಳಿಮಾಂಕಾಳಿ, ಪಿಟಿಪಿಟಿ, ಚಿಟುಕು ಮುಳ್ಳಾಡಿಸು, ಕಟಕಟ, ಬುಗುರಿ, ಹಕ್ಕಲುಹೊಲ, ಹೊಟ್ಟು, ರವುದಿ, ಹೋರಿ, ಕಸುವು. ನಿಗಿನಿಗಿ, ಸೂಸ್ಯಾಡಿ, ಬುಟ್ಟಿ, ಚೋಟುದ್ದ ಗೇಣುದ್ದ, ರಾಡಿ. ಝುಣ್ ಝುಣ್, ತಕಥೈ, ಸೈಸೈ, ಉಸಾಬರಿ. ಗೋಣೀಚೀಲ, ಝಾಡಿಸಿ, ಜಿಡ್ಡುನಾತ್, ಬಸನಿಂಗಿ, ಬಡೆಮಿಯಾ, ಗುಲಗಂಜಿ, ಡೋಲು, ಚುರುಮುರಿ, ಕುರುಕುರು, ಢಣ್‌ಢಣ್ ಇಂತಹ ಅನೇಕ ಜಾನಪದ ನುಡಿಗಟ್ಟುಗಳು ಕಣವಿಯವರ ಕಾವ್ಯದಲ್ಲಿ ಬಳಕೆಯಾಗಿ ಉತ್ತರ ಕರ್ನಾಟಕದ ಭಾಷೆಯ ಸೊಗಡು ಘಮಘಮಿಸುವಂತೆ ಮಾಡಿವೆ.

### ವಿಶಿಷ್ಟವಾದ ಪದ ಸಾಲು :

ಜಿ. ಎಸ್. ಎಸ್. ಹಾಗೂ ಕಣವಿಯವರ ಕವಿತೆಗಳಲ್ಲಿ ವಿಶಿಷ್ಟವಾದ ಸಾಲುಗಳು, ನುಡಿಗಟ್ಟುಗಳು ಆಕರ್ಷಿಸುತ್ತ ಅವರ ಕಾವ್ಯಭಾಷೆಯ ಸತ್ವವನ್ನು ಹೆಚ್ಚಿಸಿವೆ. ಜಿ. ಎಸ್. ಎಸ್. ಅವರಲ್ಲಿ ಗಾದೆ ಮಾತುಗಳ ಬಳಕೆ ಕಡಿಮೆ, ಆದರೆ ಕಣವಿಯವರ ಕವಿತೆಗಳಲ್ಲಿ ಕಾಣಬಹುದು.

### ಜಿ. ಎಸ್. ಎಸ್. ಅವರ ಕವಿತೆಯ ಕೆಲ ಸಾಲುಗಳು :

೧. ತುಂಬುದಿಂಗಳ ಹಣ್ಣು ಗೊನೆಗೆ ಗೊನೆಗೆ (ನಗೆ ಮಲ್ಲಿಗೆ)

೨. ವೇದಾಂತಿ ಹೇಳಿವನು ಹೊನ್ನೆಲ್ಲ ಮಣ್ಣು
ಕವಿಯೊಬ್ಬ ಹಾಡಿದನು ಮಣ್ಣೆಲ್ಲ ಹೊನ್ನು (ಕವಿ ವೇದಾಂತಿ)

೩. ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ (ಅನಾವರಣ)

೪. ಮತ ಮೌಢ್ಯಗಳ ನಡುವೆ ಸದ್ದಿರದೆ ಕೈ ಮುಗಿದು
ನಿಂತ ದೀಪದ ಕಂಬ (ಬಸವಣ್ಣನವರು)

೫. ಕೃಷ್ಣಮಹಿಮೆಯ ಕಥೆಗೆ ಬರೆದ ನಾರದ ಭಾಷ್ಯ ಈ ಪುರಂದರ
(ತಕ್ಕಡಿಯಿಂದ)

೬. ಬಚ್ಚಿಟ್ಟುಕೊಂಡು ಬದುಕುವದು ನನಗಿಷ್ಟವಿಲ್ಲ (ನಿಲುವು)

**ಕಣವಿಯವರ ಕವಿತೆಯ ಕೆಲಸಾಲುಗಳು :**

೧. ಮನೆಯಿರದ ಪ್ರಧಾನಿ ಇವನೆಂಥ ಭಾರತೀಯ (ಲಾಲಬಹದ್ದೂರಶಾಸ್ತ್ರಿ)

೨. ಬೆಳ್ಳಗೆ ಮೇಲೆ ಹೊರಟಿತ್ತು ಮಂದಹಾಸ ಮೋಡ ಗಾಂಧಿ ನೋಡ (ಗಾಂಧಿ)

೩. ನಡೆದು ಬಂದರೆ ಬೆಳ್ಳಿಬೆಟ್ಟವೆ ನಡೆಯ ಕಲಿತುದೊ ಎನುವೊಲು (ಬಸವನಾಳರಿಗೆ)

೪. ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ (ಮಾತು)

೫. ನಿಂತ ಬಾಳು ಬಾಳಲ್ಲ ಮಲೆತು ನಿಂತಿರುವ ನೀರು ನೋಡ(ಮೇಘೋಪಾಸನೆ)

೬. ಅಕ್ಕರತೆಯಲಿ ಮರಿಗೆ ರೆಕ್ಕೆ ಮೂಡಿಸಿ ಬಂತು ದೀಪಾವಳಿ (ದೀಪಾವಳಿ)

ಇಂತಹ ಅನೇಕ ಕವಿತೆಯ ಸಾಲುಗಳು ಕವಿಯ ಆಶಯವನ್ನು ಧ್ವನಿಸುತ್ತಲೇ ಭಾಷೆಯ ಅರ್ಥವಂತಿಕೆಗೆ ಕಾರಣವಾಗುತ್ತವೆ. ವೇದಾಂತಿ ಹೊನ್ನೆಲ್ಲವನ್ನು ಮಣ್ಣು ಎಂದು ಹೇಳಿದರೆ, ಕವಿ ಹಾಡುವದು ಮಣ್ಣೆಲ್ಲ ಹೊನ್ನು ಎಂದು. ಈ ವಿಚಾರ ವನ್ನು ಜಿ. ಎಸ್. ಎಸ್. ತಮ್ಮ ಕವಿತೆಯಲ್ಲಿ ತುಂಬಾ ಪರಿಣಾಮಕಾರಿಯಾಗಿ ವಿಶ್ಲೇ ಷಿಸಿದ್ದಾರೆ. ಇಲ್ಲಿ ಬರುವ ಅಂತ್ಯಪ್ರಾಸದ ಅಂದ ಗಮನ ಸೆಳೆಯುತ್ತದೆ. ಗಾಂಧಿ ಯನ್ನು ಮೇಲೆ ಹೊರಟಿರುವ ಮಂದಹಾಸ ಮೋಡಕ್ಕೆ ಹೋಲಿಸುವ ಕವಿ ಕಣವಿ ಯವರ ಕಾವ್ಯಭಾಷೆ ತುಂಬಾ ಆಹ್ಲಾದಕರವಾದುದು. 'ಮನೆಯಿರದ ಪ್ರಧಾನಿ, ಇವನೆಂಥ ಭಾರತೀಯ' ಎನ್ನುವ ಅವರ ಕವಿತೆಯ ಸಾಲಂತೂ ಅತೀವ ಪರಿಣಾಮ ವನ್ನು ಉಂಟುಮಾಡುತ್ತದೆ. ವಿಡಂಬನಾತ್ಮಕ ಭಾಷೆಯನ್ನು ಇಬ್ಬರೂ ಕವಿಗಳು ಬಳಸಿದ್ದಾರೆ.

ಕಣವಿಯವರ ಕವಿತೆಗಳಲ್ಲಿ ಅನೇಕ ಗಾದೆಮಾತುಗಳೂ ಕೂಡ ಬಳಕೆಯಾಗಿವೆ. ಗಾದೆಮಾತು–ಪಡೆನುಡಿಗಳು ಅವರಲ್ಲಿ ಸಹಜವಾಗಿ ಮೂಡಿ ಬರುತ್ತವೆ. ಗ್ರಾಮೀಣ ಬದುಕಿನ ಹಿನ್ನಲೆಯಲ್ಲಿ ಬೆಳೆದು ಬಂದ ಈ ಕವಿ ಜಾನಪದದ ಸೊಗಡನ್ನು ತಮ್ಮ ಅನೇಕ ಕವಿತೆಗಳಲ್ಲಿ ಸೂಸಿದ್ದಾರೆ.

೧. 'ಈಸಬೇಕು ಇದ್ದು ಜೈಸಬೇಕು' (ಮಧ್ಯಾಹ್ನದ ಮಜಲು)

೨. 'ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ' (ಜಗದೇಕಮಲ್ಲ)

೩. 'ಬಯಲು ಆಲಯದೊಳಗೊ ಆಲಯವು ಬಯಲೊಳಗೊ' (ಕಾಲ ನಿಲ್ಲುವದಿಲ್ಲ)

೪. 'ಕವ ತಿನ್ನುವವಗೆ ಹಪ್ಪಳ ಈಡೆ' (ಕಾಲ ನಿಲ್ಲುವದಿಲ್ಲ)

ಇಂತಹ ಅನೇಕ ಗಾದೆಮಾತು, ಪಡೆನುಡಿಗಳನ್ನು ಅವರ ಕವಿತೆಗಳಿಂದ ಉದಾಹರಿಸಬಹುದು. ದನಕಾಯುವ ದನಗಾಯಿ, ಸಾರುವಯ್ಯ, ಊರ ಹೊರಗೆ ಹರಿವ ಹಳ್ಳ, ಊರಗುಡ್ಡ, ಊರ ನಡುವೆ ಬೇರು ಬಿಟ್ಟಿರುವ ಆಲದ ಮರ, ಮುಪ್ಪಿನ ಷಡಕ್ಷರಿಯ ಹಾಡುಗಳು ಇವೆಲ್ಲಾ ಕಣವಿಯವರ ಬಾಲ್ಯದ ಜೀವನದ ಮೇಲೆ ಪ್ರಭಾವ ಬೀರಿರುವದರಿಂದ ಇವರ ಕಾವ್ಯದಲ್ಲಿ ಜಾನಪದ ಭಾಷೆಯ ಸೊಗಡು ಕಂಪಿಸುತ್ತದೆ.

**ಪದ ಪುನರಾವೃತ್ತಿ–ಪ್ರಾಸ–ನುಡಿಚಮತ್ಕಾರ :**

ಈ ಕವಿಗಳಿಬ್ಬರೂ ನವೋದಯದ ಸಂದರ್ಭದಲ್ಲಿಯೇ ಬರೆಯತೊಡಗಿದ್ದರಿಂದ ಆಗಿನ ಅವರ ಕವಿತೆಗಳಲ್ಲಿ ಅಂತ್ಯಪ್ರಾಸದ ಸೊಗಡು ಮರೆಯಾಗಿಲ್ಲ. ಆದರೆ ನಂತರ ನವ್ಯದ ಸಂದರ್ಭದಲ್ಲಿ ಬರೆದ ಅವರ ಕವಿತೆಗಳಲ್ಲಿ ಪ್ರಾಸ ಮರೆಯಾಯಿತು. ದ್ವಿತಿಯಾಕ್ಷರ ಪ್ರಾಸವಾಗಿರಬಹುದು, ಅಂತ್ಯಪ್ರಾಸವೇ ಆಗಿರಬಹುದು, ಈ ಕವಿಗಳು ಪ್ರಾಸಕ್ಕಾಗಿಯೇ ಪ್ರಾಸ ಬಳಸಿದವರಲ್ಲ,ಅಲ್ಲಿ ಕೃತ್ರಿಮಂತೆ ಇರದೆ ಸಹಜತೆ ಇದೆ.

ಸುಗ್ಗಿ ಬಂದಿತು ಹಿಗ್ಗು ಹೊಮ್ಮಿತು ಮರದ ಹರೆಹರೆಯೊಳಗಡೆ
ಚಿಗುರು ಹೂವಿನ ಕಾಯಿಹಣ್ಣಿನ ಬಯಕೆಗಾಗಿದೆ ಬಿಡುಗಡೆ

[ಜಿ. ಎಸ್. ಎಸ್. : ಚೈತ್ರ]

ನುಗ್ಗೆ ಹೂವಿಗೆ ಲಗ್ಗೆಯಿಟ್ಟು ಮೊರೆದಿವೆ ದುಂಬಿ
ಕಣ್ಣೆದುರು ಕುಣಿಯುತಿವೆ ಕರ್ಪೂರಗೊಂಬಿ

[ಕಣವಿ : ಋತುಸಂಸಾರ]

ಕೇವಲ ಇದೊಂದೇ ಉದಾಹರಣೆ ಸಾಕು, ಈ ಕವಿಗಳ ಪ್ರಾಸ ಸಹಜತೆಗೆ. ಅನೇಕ ಕಡೆ ದ್ವಿತಿಯಾಕ್ಷರ ಪ್ರಾಸದ ಜತೆಗೆ ಅಂತ್ಯಪ್ರಾಸವೂ ತಾಳ ಹಾಕಿದೆ. ಈ ಕವಿಗಳ ಕವಿತೆಗಳಲ್ಲಿ ಪದ ಪುನರಾವೃತ್ತಿಯಿಂದ ಹೊರಡುವ ಅರ್ಥಗಳು ಅನಂತ.

೧. ಹೂವ ಬಿಟ್ಟಿವೆ ಹೂವ ತೊಟ್ಟಿವೆ ಹೂವನುಟ್ಟಿವೆ ಮರಗಳು! [ಚೈತ್ರ]
೨. ಬೇಡ ಬೇಡ ಬೇಡ ಇನ್ನು ಇವಳು ನನ್ನ ಹತ್ತಿರ [ಬೇಡ ಇವಳು ಹತ್ತಿರ]
೩. ಟಿಕ್ ಟಿಕ್ ಟಿಕ್ .......... [ಮಬ್ಬಿನಿಂದ ಮಬ್ಬಿಗೆ]
೪. ಸಾಲು ಸಾಲು ಸಾಲು .......... (ಸಂಜೆದಾರಿ)

ಜಿ. ಎಸ್. ಎಸ್. ಅವರ ಕವಿತೆಗಳಲ್ಲಿ 'ಇಂತಹ ಅನೇಕ ಸಾಲುಗಳಲ್ಲಿ ಪದ ಪುನರಾವೃತ್ತಿಯಿಂದ ಅರ್ಥದ ಸೊಗಡು ಹೆಚ್ಚುತ್ತಾ ಹೋಗುತ್ತದೆ. ಒಂದೇ ಪದ ಅನೇಕಸಲ ಪುನರಾವೃತ್ತಿಯಾಗುತ್ತ ತೀವ್ರ ಪರಿಣಾಮವನ್ನುಂಟು ಮಾಡುತ್ತದೆ,

ಕಣವಿಯವರ ಕವಿತೆಗಳು ಪದ ಪುನರಾವೃತ್ತಿಯಾಗಿ ಅರ್ಥ ಶ್ರೀಮಂತಿಕೆಯನ್ನು ಹೆಚ್ಚಿಸುವದರ ಜತೆಗೆ ಉತ್ತರ ಕರ್ನಾಟಕದ ಆಡುನುಡಿಯ ಸೊಗಡನ್ನೂ ಮುಡಿದು ನಿಂತಿದೆ.

೧. ಕೂವೂ ಜಗ್ ಜಗ್ ಪುವ್ವೀಟುವಿಟ್ಟವೂ — (ಋತು ಸಂಸಾರ)
೨. ಧಡ್ .... ... ಧಡ್ .... ... ಧಡ್ — (ಕೊನೆಯ ನಿಲ್ದಾಣ)
೩. ಪುಸ್ ....... ಪುಸ್ ....... ಪುಸ್ ....... — (ಕೊನೆಯ ನಿಲ್ದಾಣ)
೪. ಧಡಗ್.......ಗಡಗ್ ....... ಧಡಗ್.......ಗಡಗ್— (ಕೊನೆಯ ನಿಲ್ದಾಣ)
೫. ಜಗ್ ...... ಜಗ್......ಜಗ್......ಜಗ್ ......— (ಕೊನೆಯ ನಿಲ್ದಾಣ)
೬. ನಮಸ್ತೇ ನಮಸ್ತೇ ನಮಸ್ತೇ — (ಜೀರ್ಣೋದ್ಧಾರ)

ಇಂತಹ ಅನೇಕ ನುಡಿಗಳನ್ನು ಉದಾಹರಿಸಬಹುದು. ಇಂತಹ ಹಲವು ನುಡಿಗಳು ಮತ್ತೆ ಮತ್ತೆ ಪುನರಾವರ್ತನಗೊಂಡು ಓದುಗರ ಮುಂದೆ ದೃಶ್ಯಗಳಾಗಿ ಬಿಚ್ಚಿಕೊಳ್ಳುತ್ತವೆ.

ಈ ಕವಿಗಳ ಅನೇಕ ಕವಿತೆಗಳಲ್ಲಿ ನುಡಿಗಳನ್ನು ಚಮತ್ಕಾರಿಕವಾಗಿ ಬಳಸಿಕೊಂಡ ಬಗೆ ಕುತೂಹಲಕಾರಿಯಾಗಿದೆ.

ಕೆಲವರಿದ್ದಾರಯ್ಯ ನನಗೆ ಪ್ರಿಯ ಮಿತ್ರರು,
ಆದರೂ ಇದ್ದಾನೆ ಶತ್ರು ಒಬ್ಬನೇ —
ಆ ಅವನು ನಾನೆ ! [ ಮಿತ್ರ-ಶತ್ರು ]

ಜಿ. ಎಸ್. ಎಸ್. ತಮ್ಮ ಇಂತಹ ಕವಿತೆಗಳ ಮೂಲಕ ಭಾಷೆಯ ಸಾಧ್ಯತೆಗಳನ್ನು ಸೂರೆಗೊಂಡರೆ, ಕಣವಿಯವರು ಮಕ್ಕಳ ಆಟದ ಹಾಡಿನ ಶೈಲಿಯಲ್ಲಿ ಚಮತ್ಕಾರವನ್ನುಂಟು ಮಾಡುತ್ತಾರೆ. ಕಣವಿಯವರ 'ಗಿರಿಗಿರಿಗಿಂಡಿ' ಕವಿತೆ, ಬೇಂದ್ರೆಯವರ 'ಪಾತರಗಿತ್ತಿ ಪಕ್ಕ' ಕವಿತೆಯನ್ನು ನೆನಪಿಗೆ ತರುತ್ತದೆ. ಭಾಷೆ ಮತ್ತು ಲಯ ವಿನ್ಯಾಸದ ಪ್ರಯೋಗವನ್ನು ಕಣವಿಯವರ ಅನೇಕ ಕವಿತೆಗಳಲ್ಲಿ

ಕಾಣಬಹುದಾಗಿದೆ. ಶಬ್ದಗಳ ಹಾಸು-ಬೀಸು, ಪ್ರಾಸ-ಅನುಪ್ರಾಸಗಳ ಒಪ್ಪ, ರಾಗ-ಲಯಗಳ ಸಂಯೋಜನೆ ಇವರಲ್ಲಿ ಆಕರ್ಷಕವಾಗಿ ಕಾಣುತ್ತದೆ.

ಗಿರಿಗಿರಿಗಿಂಡಿ
ಇಬತ್ತಿಉಂಡಿ
ಬಗಾಟ ಬುಗುರಿ
ತಿರುಗುವ ತಿಗರಿ
ತೆಂಗಿನ ಚವರಿ
ಗಾಳಿ ಸವಾರಿ ... ...

(ಗಿರಿಗಿರಿ ಗಿಂಡಿ)

ಆನಿ ಬಂತವ್ವ ಆನಿ
ಇದು ಎಲ್ಲಿತ್ತವ್ವ ಮರಿಯಾನಿ ॥
ಎಂಥ ಚಿಟ್ಟಾನಿ
ನನ್ನ ಕಟ್ಟಾಣಿ ... ...

[ಆಗಿ ಬಂತವ ಆನಿ]

ಕಣವಿಯವರ ಮೊದಲ ನುಡಿಯಲ್ಲಿ ಜಾನಪದದ ಭಾಷೆಯೊಳಗಿನ ಚಮತ್ಕಾರಕ ಶೈಲಿ ಕಂಡರೆ, ಎರಡನೆಯ ನುಡಿಯಲ್ಲಿ ಸುಂದರವಾದ ಭಾಷಾಶಿಲ್ಪವಿದೆ. 'ಕೊನೆಯ ನಿಲ್ದಾಣ' ಹಾಗೂ ಮೇಲೆ ಉಲ್ಲೇಖಿಸಿದ ಇತರ ಕವಿತೆಗಳಲ್ಲಿ ಪ್ರಾಸ ಹಾಗೂ ನುಡಿ ಚಮತ್ಕಾರಗಳೇ ಮುಖ್ಯವಾಗಿವೆ. ಕಣವಿಯವರು ಅಷ್ಟಪಟ್ಪದಿಗಳನ್ನು ಬರೆದಿದ್ದಾರೆ. ಅಷ್ಟಪಾದಗಳ ಪ್ರಾಸವನ್ನು ಬಿಟ್ಟುಕೊಟ್ಟ ಕೆಲವು ಸಾನೆಟ್‌ಗಳೂ ಇವೆ. ಪ್ರಾರಂಭದಲ್ಲಿ ತೀರ ಸರಳವಾಗಿರುವ ಇವರ ಕಾವ್ಯಭಾಷೆ ಬರುಬರುತ್ತ ರೂಪಕ ಭಾಷಾಶೈಲಿಯಾಗಿ ಬೆಳವಣಿಗೆಯಾಗಿದೆ. ಸಾನೆಟ್‌ಗಳಿಗಂತೂ ಈ ಶೈಲಿ ಹೇಳಿ ಮಾಡಿಸಿದಷ್ಟು ಔಚಿತ್ಯಪೂರ್ಣವಾಗಿ ಹೊಂದಿಕೊಳ್ಳುತ್ತದೆ. 'ದೀಪಧಾರಿ' ಕವನ ಸಂಕಲನ ಕಣವಿಯವರಿಗೆ ಕಾವ್ಯಮಾರ್ಗದಲ್ಲಿ ಒಂದು ಹೊಸ ತಿರುವು ಕೊಟ್ಟ ಕೃತಿಯಾಗಿದೆ. ಮಾತುಗಳಿಂದಲೇ ಇವರು ಒಂದು ನೂತನ ರಚನಾವಿಧಾನವನ್ನು ಭಾಷೆಯ ಕ್ರಿಯೆಯಲ್ಲಿ ತೋರಿಸಿಕೊಡುತ್ತಾರೆ. ಇಬ್ಬರ ಕವಿತೆಗಳಲ್ಲಿ ಬರುವ ಈ ನುಡಿ ಚಮತ್ಕಾರ ಪರಿಣಾಮದ ಜತೆಗೆ ಕುತೂಹಲವನ್ನುಂಟುಮಾಡುತ್ತದೆ.

**ಸಂಸ್ಕೃತ-ಹಳಗನ್ನಡ ಪದಪ್ರಯೋಗ :**

ಈ ಕವಿಗಳ ಅನೇಕ ಕವಿತೆಗಳಲ್ಲಿ ಸಂಸ್ಕೃತಭಾಷೆಯ ಪದಗಳು, ಹಳಗನ್ನಡದ ನುಡಿಗಳು ಬಳಕೆಯಾಗಿವೆ. ವಚನಕಾರರ ಕೆಲವು ವಚನಗಳಲ್ಲಿ ಅಲ್ಲಲ್ಲಿ ಸಂಸ್ಕೃತ

ಪದಗಳು ಬಳಕೆಯಾಗಿವೆ. ಅಲ್ಲಿ ಹೇಗೆ ಅರ್ಥಶ್ರೀಮಂತಿಕೆಗಾಗಿ ವಿವೇಚಿಸುವ ವಿಷಯದ ಪೂರ್ವ ದಾಖಲೆಯಾಗಿ ಆ ಪದಗಳು ಬಳಕೆಯಾಗಿವೆಯೋ ಅದೇ ರೀತಿ ಜಿ. ಎಸ್. ಎಸ್. ಹಾಗೂ ಕಣವಿಯವರ ಕವಿತೆಗಳಲ್ಲಿ ಸಂಸ್ಕೃತದ ಸಾಲುಗಳು ಬಂದಿವೆಯೆನ್ನಬಹುದು.

**ಸಂಸ್ಕೃತ : ಜಿ. ಎಸ್. ಎಸ್. ಕವಿತೆಗಳಲ್ಲಿ**

೧. 'ಗಂಭೀರೆ ತೇಜೋನ್ವಿತೆ, ಕ್ರೌಂಚಕ್ಷಣಿತೆ ನಮೋಸ್ತುತೇ' [ಶಾರದೆ]
೨. 'ಅಚಲೋಯಂ ಸನಾತನಂ' [ಬೀಜದಿಂದ ಬೀಜಕ್ಕೆ]
೩. 'ಸಂಭವಾಮಿ ಯುಗೇ ಯುಗೇ' [ದೋಷೋದ್ಧಾರಕ]
೪. 'ತಮಸೋಮಾ ಜ್ಯೋತಿರ್ಗಮಯಾ' [ನನ್ನ ಹಣತೆ]
೫. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' [ಹುಟ್ಟಿದ ಹಬ್ಬ]
೬. 'ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ' [ನಿರ್ಧಾರ]

**ಕಣವಿಯವರ ಕವಿತೆಗಳಲ್ಲಿ**

೧. 'ಮಹಾಜನೋಯೇನ ಗತಸ್ಸಪಂಥಾ' [ಕೊನೆಯ ನಿಲ್ದಾಣ]
೨. 'ನಮೋ ನಮಸ್ತೇಸ್ತು ಸಹಸ್ರ ಕೃತ್ವಃ
ಪುನಶ್ಚಭೊಯೋಪಿ ನಮೋನಮಸ್ತೆ' [ಅಪರಾವತಾರ]
೩. 'ಭದ್ರಂ ಶುಭಂ ಮಂಗಲಂ' [ಶಿಶು ಕಂಡ ಕನಸು]
೪. 'ತೃಣಮಪಿ ನ ಚಲತಿ' ನಿನ್ನ ವಿನಾ [ರಂಜನಾ]

ಇಂತಹ ಕೆಲವು ಕವಿತೆಗಳಲ್ಲಿ ಈ ಕವಿಗಳು ಸಂಸ್ಕೃತದ ಶ್ಲೋಕಗಳನ್ನು ಉದಾಹರಿಸುವದರ ಮೂಲಕ ತಮ್ಮ ಕಾವ್ಯವಸ್ತುವಿಗೆ ಒಂದು ತಳಪಾಯದ ಆಧಾರವನ್ನು ತೋರಿಸಿಕೊಡುತ್ತಾರೆ. ಕೆಲವು ಕಡೆ ಇವು ಹವ್ಯಾಸವೆಂಬಂತೆಯೂ ಬಳಕೆಯಾಗಿವೆ.

**ಹಳೆಗನ್ನಡ :** ಜಿ. ಎಸ್. ಎಸ್. ಕವಿತೆಗಳಲ್ಲಿ :

೧. 'ಕಣ್ ಬಿಡುವ ಇರುಳ ನಭ ದುರ್ಬಲರ ನೆಲೆವೀಡು' ! [ಮಾಗಿ]
೨. 'ಜೀವಯಾತ್ರೆಯ ಪಥಕೆ ಸಹಯಾತ್ರಿ ಮೇಣ್ ಸ್ಫೂರ್ತಿ' [ಮನದನ್ನೆ]
೩. 'ಪಗೆಗೆ ಪಗೆ ಕೆಳಗೆ ಕೆಳೆ' [ನಿರ್ಧಾರ]

## ಕಣವಿಯವರ ಕವಿತೆಗಳಲ್ಲಿ

೧. 'ತೇಲಿಸಿತು ನಿನ್ನೆಡೆಗೆ ತನ್ನಮೃತ ಲೀಲೆಯು'
[ಶ್ರೀರಾಮಾಯಣ ದರ್ಶನವನ್ನೋದಿ]

೨. 'ಮಿಡಿಯಿತೊಂದದ್ಭುತೋಂಕಾರ ವೀಣಾರವಂ [ " " ]

೩. 'ಕಾಲಪುರಷಂಗೆ ಗುಣಮಿಲ್ಲಂ ಗಡ' [ಕಾಲಪುರುಷನಲ್ಲಿ ಕವಿಗಳ ಕೋರಿಕೆ]

ಇಂತಹ ಕೆಲವು ಕಡೆ ಇವರಿಬ್ಬರ ಕವಿತೆಗಳಲ್ಲಿ ಹಳಗನ್ನಡ ಬಳಕೆಯಾಗಿದೆ. ಆದರೆ ಇವೆಲ್ಲಾ ವಸ್ತುವಿನ ಹಿನ್ನಲೆಯಲ್ಲಿ ಬಂದಂಥವುಗಳಾಗಿವೆ. ಸಂಸ್ಕೃತದ ವ್ಯಾಮೋಹವಾಗಲಿ, ಹಳಗನ್ನಡದ ಅನಿವಾರ್ಯತೆಯಾಗಲಿ ಈ ಕವಿಗಳಿಗಿಲ್ಲ. ರಾಮಾಯಣ ದರ್ಶನವನ್ನೋದಿ ಬೆರಗಾದ ಕಣವಿಯವರು ಅದೇ ದಾಟಿಯಲ್ಲಿಯೇ ಅದರ ಭವ್ಯದರ್ಶನವನ್ನು ಹೇಳಿ ಬಿಡುತ್ತಾರೆ. ಇಂತಹ ಸಂದರ್ಭದಲ್ಲಿ ಹಳಗನ್ನಡವಾಗಲಿ ಸಂಸ್ಕೃತವಾಗಲಿ ಸಹಜವಾಗಿ ಅವರ ಕವಿತೆಗಳಲ್ಲಿ ಕಾಣಿಸಿಕೊಂಡುಬಿಡುತ್ತವೆ.

ಎಪ್ಪತ್ತು-ಎಂಬತ್ತರ ದಶಕದಲ್ಲಿ ಈ ಕವಿಗಳಿಬ್ಬರ ಕಾವ್ಯಭಾಷೆಯು ನಡಿಗೆಯೇ ಬಹಳಷ್ಟು ಬದಲಾವಣೆಯಾಗಿದೆ. ಇಲ್ಲಿ ಶಬ್ದಚಮತ್ಕಾರವಾಗಲಿ, ಸಂಸ್ಕೃತದ ಆಕರ್ಷಣೆಯಾಗಲಿ, ಹಳಗನ್ನಡದ ಬಳಕೆಯಾಗಲಿ ಕಾಣುವದಿಲ್ಲ. ಕವಿಕಾಲ-ಪರಿಸರ ಘಟ್ಟಗಳಿಗೆ ಅನುಗುಣವಾಗಿ ಬೆಳೆದುಬಂದದ್ದನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

**ಸಮಾರೋಪ :**

ಜಿ. ಎಸ್. ಎಸ್. ಹಾಗೂ ಕಣವಿಯವರು ಕನ್ನಡ ಕಾವ್ಯಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಂತೆ, ಕನ್ನಡ ಭಾಷೆಗೂ ಹೊಸ ಸಾಧ್ಯತೆಗಳನ್ನು ನೀಡಿದ್ದಾರೆ. ನವೋದಯದ ಸಂದರ್ಭದಲ್ಲಿ ಅವರು ರೊಮ್ಯಾಂಟಿಕ್ ದೃಷ್ಟಿಯಿಂದ ಹೊರತಾಗಿರಲಿಲ್ಲವಾದರೂ ನವ್ಯಕಾವ್ಯದ ಮಿತಿಗಳನ್ನೂ ಕೂಡ ಅವರು ಬೇಗನೇ ಮನಗಂಡರು. ಕನ್ನಡ ಕಾವ್ಯದ ಬದಲಾಗುತ್ತಿರುವ ಘಟ್ಟಗಳನ್ನು ಬಹು ಸೂಕ್ಷ್ಮವಾಗಿ ವೀಕ್ಷಿಸುತ್ತ ಅವರೊಳಗಿದ್ದೂ ಇರದಂತಹ ತ್ಯಾಗ-ಭೋಗ ಸಮನ್ವಯದ ಸಿದ್ಧಿಯನ್ನು ಇವರು ಪಡೆದಿದ್ದಾರೆ. ಇವರು ಬೆಳೆದಂತೆ ಇವರ ಕಾವ್ಯಭಾಷೆಯೂ ಧ್ವನಿಪೂರ್ಣವಾಗುತ್ತ ನಡೆದಿರುವದನ್ನು ಗುರುತಿಸಬಹುದಾಗಿದೆ.

ಈ ಕವಿಗಳ ಕಾವ್ಯಭಾಷೆಯು ಬಗೆಗೆ ಈಗಾಗಲೇ ಕೆಲವು ಲೇಖನಗಳು ಪ್ರಕಟವಾಗಿವೆ. " ಮೊದಲ ಮೂರು ಸಂಕಲನಗಳಲ್ಲಿ ಕವಿ ಆಶಯ ಅಥವಾ ಹೇಳಿಕೆಗಳನ್ನು ಕವನದ ಭಾಷೆಯೊಳಗಿನಿಂದ ಸಾಧಿಸದೆ ಹೊರಗಿನಿಂದ ತಂದು ಜೋಡಿಸು

ತ್ತಾನೆ. ಇದರಿಂದ ಭಾಷೆಯ ಉಪಯೋಗ ಸಾಕಷ್ಟು ಆಗುವದಿಲ್ಲ, ಅಲ್ಲದೆ ವರ್ಣನೆಗಳಲ್ಲಿಯೂ ಪದ, ವಾಕ್ಯಗಳ ಬಳಕೆ ಅತಿಯಾಗುತ್ತದೆ. ಜಿ. ಎಸ್. ಎಸ್. ತಮ್ಮ ಮೊದಲಿನ ಕೆಲವು ಕವನಗಳಲ್ಲಿ ತೋರುವ ಯಶಸ್ಸನ್ನು ಭಾಷೆಯ ದೃಷ್ಟಿಯಿಂದ ಆನಂತರದ ಕವನಗಳಲ್ಲಿ ತೋರುವದಿಲ್ಲ " – [ಸ್ನೇಹ ಕಾರ್ತೀಕ. ಪುಟ ೪೨೬]

ಜಿ. ಎಸ್. ಎಸ್. ಅವರ ಅಭಿನಂದನ ಗ್ರಂಥ 'ಸ್ನೇಹ ಕಾರ್ತೀಕ' ಕೃತಿಯಲ್ಲಿ ಕೃಷ್ಣಪರಮೇಶ್ವರ ಭಟ್ಟ ಅವರು 'ಕಾವ್ಯ ಮತ್ತು ಭಾಷೆ' ಎಂಬ ತಮ್ಮ ಲೇಖನದಲ್ಲಿ ಹೀಗೆ ಹೇಳಿದ್ದಾರೆ. ಆದರೆ ಭಟ್ಟರ ಮಾತುಗಳಿಗೆ ಯಾವುದೇ ಸ್ಪಷ್ಟ ಆಧಾರಗಳಿಲ್ಲ. ಹಾಗೆ ನೋಡಿದರೆ ಜಿ. ಎಸ್. ಎಸ್. ಅವರ ಕಾವ್ಯದ ಆಶಯ–ವಸ್ತು–ಧೋರಣೆ ಬೆಳೆದಂತೆಲ್ಲ ಅವರ ಭಾಷೆಯೂ ಬೆಳೆದಿದೆ.

ಕಣವಿಯವರ ಮೂಲ ಮನೋಧರ್ಮವಾದ 'ತಾಟಸ್ಥ್ಯ'ವನ್ನು ಗುರುತಿಸಿದ ಚಂದ್ರಶೇಖರ ಪಾಟೀಲರು ಕಣವಿಯವರ ಕಾವ್ಯದ ರೀತಿಯನ್ನು ಕುರಿತು ಕಣವಿಯವರ ಅಭಿನಂದನ ಗ್ರಂಥವಾದ 'ಚೆಂಬೆಳಕು' ಕೃತಿಯಲ್ಲಿ ಹೀಗೆ ಹೇಳಿದ್ದಾರೆ.

"ಭಾವನಾತ್ಮಕವಾಗಿ ವೈಚಾರಿಕವಾಗಿ ಒಂದು ಪೂರ್ವ ನಿಶ್ಚಿತವಾದ (ಸುರಕ್ಷಿತ) ನೆಲೆಯನ್ನು ಕಂಡುಕೊಂಡು, ಆ ನೆಲೆಯಿಂದಲೇ ಒಂದು ಬಗೆಯ ಸಿಂಹಾವಲೋಕನ ಮಾಡುತ್ತ, ಕಣ್ಣಿನ ಚೌಕಟ್ಟಿನಲ್ಲಿ ಬರುವ ಚಿತ್ರಗಳನ್ನು ಚಿತ್ರಿಸುತ್ತ ಹೋಗುವುದು, ಯಥಾಸ್ಥಿತಿಯನ್ನು ಪ್ರಾಮಾಣಿಕವಾಗಿ ಶಬ್ದಗಳಲ್ಲಿ, ಪ್ರತಿಮೆಗಳಲ್ಲಿ ಕಟೆಯುತ್ತ ಹೋಗುವುದು ಕಣವಿಯವರು ಒಪ್ಪಿಕೊಂಡ ಕಾವ್ಯದ ರೀತಿ" —

[ಚೆಂಬೆಳಕು — ಪುಟ : ೨೭೬].

ಚಂಪಾ ಅವರ ಈ ಮಾತುಗಳನ್ನು ಕಣವಿಯವರ ಕಾವ್ಯದ ವಸ್ತು ಧೋರಣೆಯ ಹಿನ್ನಲೆಯಲ್ಲಿ ಒಪ್ಪಬಹುದು. ಕಣವಿಯವರು ಭಾಷೆಯ ದೃಷ್ಟಿಯಿಂದ ಗಮನಾರ್ಹವಾದದ್ದನ್ನು ಸಾಧಿಸಿದ್ದಾರೆ. ಉತ್ತರ ಕರ್ನಾಟಕದ ಭಾಷೆಯ ಸೊಗಡನ್ನು ಬೇಂದ್ರೆಯವರ ನಂತರ ಕಣವಿಯವರು ಕವಿತೆಗಳ ಮೂಲಕ ಸಾಧಿಸಿ ತೋರಿಸಿದರೆ, ಚಂದ್ರಶೇಖರ ಕಂಬಾರ ಅವರು ಹಾಡುಗಳ ಮೂಲಕ ಪ್ರಕಟಿಸಿದ್ದಾರೆ,

"ಕಣವಿಯವರನ್ನು ಅಭ್ಯಾಸಮಾಡುವವರಿಗೆ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಅವರು ಕವಿತೆಯ ಉದ್ದೇಶಕ್ಕೆ ಉಳಿದ ಎಲ್ಲ ಪರಿಕರಗಳನ್ನು ಸಹಾಯಕವಾಗಿ ಸಾಧನವಾಗಿ ಮಾಡುತ್ತಾರೆ. ಅವರಲ್ಲಿ ಛಂದಸ್ಸು ಒಂದು 'ಅಲಂಕಾರ'ವಾಗಿ ಕವಿತೆಯ ಅರ್ಥವನ್ನು ಹಿಡಿದಿಡಲು ಅಥವಾ ವ್ಯಂಜಿಸಲು ಸಾಧನವಾಗಿ ಬರುತ್ತದೆ.

ವಿಶೇಷವಾಗಿ ಅವರು ಅಷ್ಟಪಟ್ಪದಿಗಳಲ್ಲಿ ಸಾಧಿಸಿರುವುದು ಬಹು ದೊಡ್ಡದು. ಅಲ್ಲಿ ಅವರು ತರುವ ಗಣಗಳಿಗಿಂತ ಮಧ್ಯೆ ಮಧ್ಯೆ ಅವರು ತಂದಿರುವ ವಿರಾಮ ಸ್ಥಾನಗಳು ಅಧ್ಯಯನ ಯೋಗ್ಯವಾಗುತ್ತವೆ". (ಚೆಂಬೆಳಕು. ಪುಟ : ೩೧೧) ಎನ್ನುವ ಡಾ. ಚಿದಾನಂದ ಮೂರ್ತಿಯವರ ಮೇಲಿನ ಮಾತುಗಳಲ್ಲಿ ಔಚಿತ್ಯ ವಿದೆ. ಕಣವಿಯವರ ಕವಿತೆಗಳ ಧ್ವನಿಸ್ವನ್ನು ಕುರಿತು ಹೇಳಿರುವ ಡಾ. ಚಿದಾನಂದ ಮೂರ್ತಿಯವರು ಕಣವಿಯವರ ಕಾವ್ಯಭಾಷೆಗೆ ಸಂಬಂಧಿಸಿದಂತೆ ನಿಖರವಾಗಿ ಹೇಳಿದ್ದಾರೆ.

ಜಿ. ಎಸ್. ಎಸ್. ಹಾಗೂ ಕಣವಿ ಕನ್ನಡಕ್ಕೆ ನೀಡಿದ್ದು ಬಹಳಷ್ಟಿದೆ. ಎಲೆ ಮರೆಯ ಹೂವಿನಂತೆ ಯಾವ ಅಬ್ಬರವನ್ನೂ ಉಂಟುಮಾಡದೆ ಸದ್ದಿಲ್ಲದೆ ಇವರು ಕಾವ್ಯದಲ್ಲಿ ಸಾಹಿತ್ಯದಲ್ಲಿ ಸಾಧಿಸಿದ್ದನ್ನು ಇಂದು ಶ್ರದ್ಧೆಯಿಂದ ತಿಳಿದುಕೊಳ್ಳಬೇಕಾ ಗಿದೆ. ಹೊಸಹೊಸ ದೃಷ್ಟಿಕೋನಗಳಿಂದ ಅಧ್ಯಯನ ಮಾಡಿ ಈ ಕವಿದ್ವಯರ ಸಾಹಿತ್ಯಕ ಶ್ರಮವನ್ನು ಸಾರ್ಥಕ ಪಡಿಸಿಕೊಳ್ಳಬೇಕಾಗಿದೆ.



# ಕಾವ್ಯಶಿಲ್ಪ

**ಜಿ. ಎಸ್. ಅವಧಾನಿ**

ಯಾವುದೇ ಒಂದು ಕಲಾಕೃತಿಯನ್ನು ಮತ್ತು ಕವಿಯನ್ನು ಒಂದು ನಿರ್ದಿಷ್ಟ ಚೌಕಟ್ಟಿನೊಳಗೇ ಗ್ರಹಿಸುವುದು ಅನಿವಾರ್ಯವೇನೂ ಅಲ್ಲ. ಆದರೆ ಸಾಹಿತ್ಯದ ಸಂದರ್ಭದಲ್ಲಿ ವಿವಿಧ ಪಂತ ಪ್ರಕಾರಗಳ ಅಡಿಯಲ್ಲಿ ಕೃತಿಯನ್ನು ವಿಶ್ಲೇಷಿಸುವ. ಅರ್ಥೈಸುವ ಪರಂಪರೆ ಎಲ್ಲ ದೇಶ ಕಾಲಗಳಲ್ಲೂ ಬೆಳೆದು ಬಂದಿರುವುದನ್ನು ಗುರುತಿಸಬಹುದು. ಅದು ಸರಿಯೋ, ತಪ್ಪೋ ಎಂಬ ಮೂಲ ಭೂತ ಪ್ರಶ್ನೆಯನ್ನು ಚರ್ಚೆಗೆತ್ತಿಕೊಳ್ಳುವುದು ನನ್ನ ಉದ್ದೇಶ ಅಲ್ಲ. ಆದರೆ ಯಾವುದೇ ಒಬ್ಬ ಕವಿಯ ಕೃತಿ ಬಿಟ್ಟುಕೊಡಬಹುದಾದ ನೆಲೆಯಿಂದ, ಆ ಕೃತಿಯ ಬೆಲೆ ಕಟ್ಟುವುದು ಸಹಜ, ಮತ್ತು ಆಯಾ ಕಾಲದ ಪ್ರಧಾನ ಪ್ರಕಾರದ ಕಕ್ಷೆಯಲ್ಲಿ ಒಳಗೊಳ್ಳಬಹುದಾದ ಲಕ್ಷಣಗಳನ್ನು ಕಂಡಿರಿಸಿದ್ದರೆ, ಅದೇ ಚೌಕಟ್ಟಿನೊಳಗೇ ಇಟ್ಟು ನೋಡುವುದೇನೂ ಅಪರಾಧ ಅಲ್ಲ. ಹಾಗಾಗಿ ಕನ್ನಡದಲ್ಲೂ ನವೋದಯ, ನವ್ಯ, ದಲಿತ, ಬಂಡಾಯ ಮೊದಲಾದ ಪ್ರಕಾರಗಳ ಹಿನ್ನಲೆಯಲ್ಲಿ ಕಾವ್ಯವನ್ನು ಕಟ್ಟುವ ಮತ್ತು ಬೆಲೆಗಟ್ಟುವ ಕೆಲಸ ನಡೆದಿದೆ.

ವಿಮರ್ಶೆಯ ಸಂದರ್ಭದಲ್ಲೆಲ್ಲ ನವೋದಯ, ನವ್ಯದ ಜತೆಗೆ 'ಸಮನ್ವಯ' ಎಂಬ ಮಾತನ್ನೂ ಸೇರಿಸುವುದುಂಟು. ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿಯವರನ್ನು ಸಮನ್ವಯ ಕವಿಗಳು ಎಂದೇ ಕರೆಯುವ ರೂಢಿ ಇದೆ, ಇದು ಎಷ್ಟರ ಮಟ್ಟಿಗೆ ರೂಢಿಗೆ ಬಿದ್ದು ಬಿಟ್ಟಿದೆ ಅಂದರೆ ಯಾರು ಇದನ್ನು

ಮೊದಲು ಮಾಡಿದರು ? ಅವರ ಅಭಿಪ್ರಾಯ ವೇನಿತ್ತು ? ಎಂಬುದು ಈಗ ಮುಖ್ಯ ವಾಗಿಲ್ಲ. ಚಲಾವಣೆಯ ನಾಣ್ಯದಂತೆ ಕೈ ಬದಲಾಯಿಸುತ್ತ ನಡೆದಿದೆ[1]. ಆದರೆ ಸಮನ್ವಯದ ಸ್ಪಷ್ಟ ವಿಶ್ಲೇಷಣೆ ಮಾಡಿದ ಹಾಗಿಲ್ಲ. ಗಂಭೀರವಾಗಿ ಮತ್ತು ಪ್ರಾಮಾಣಿಕವಾಗಿ ಈ ಪದದ ವ್ಯಾಖ್ಯಾನ ನಡೆಸಲಿಲ್ಲ. 'ನವೋದಯ ಹಾಗೂ ನವ್ಯ ಕಾವ್ಯಮಾರ್ಗಗಳ ಲಕ್ಷಣಗಳನ್ನು ಒಗ್ಗೂಡಿಸಲು ಯತ್ನಿಸಿದವರು ಎಂಬ ಸರಳ ಅರ್ಥದಲ್ಲಿ ಸಮನ್ವಯ ಕವಿ ಎಂಬ ಮಾತು ಚಾಲ್ತಿಪಡೆದಿದೆ ಅಷ್ಟೆ'[2]

'ಸಮನ್ವಯ'ವೆಂದರೆ ಒಂದು ಬಗೆಯ ಸರಳ ಹೊಂದಾಣಿಕೆ ಅನುಭವ ಹಾಗೂ ಅಭಿವ್ಯಕ್ತಿಗಳೆರಡರ ದೃಷ್ಟಿಯಿಂದಲೂ ಮಾಡಿಕೊಂಡ ರಾಜಿ ಎಂಬ ಅರ್ಥ ಇಂದಿನ ವಿಮರ್ಶೆಯಲ್ಲಿ ಪ್ರಚಲಿತವಾಗಿರುವುದರಿಂದ ಅದಕ್ಕೆ ಇಷ್ಟು ಗೌರವವಿಲ್ಲ'[3] ಅದ್ದರಿಂದ ಕಣವಿ, ಶಿವರುದ್ರಪ್ಪ ಇಬ್ಬರೂ ತಾವು ಸಮನ್ವಯ ಕವಿಗಳು ಎಂದು ಹಣೆಪಟ್ಟಿ ಹಚ್ಚುವುದನ್ನು ವಿರೋಧಿಸಿದ್ದಾರೆ.

ಒಂದು ಮಾರ್ಗದಿಂದ ಇನ್ನೊಂದು ಮಾರ್ಗಕ್ಕೆ ಬದಲಾಗುವುದು ಅಂದರೆ ಅದು ಬೆಳವಣಿಗೆಯನ್ನು ಸೂಚಿಸಬಹುದು. ಅಥವಾ ಕೇವಲ 'ಬದಲಾವಣೆ' ಯಷ್ಟೇ ಆಗಿರಲೂ ಸಾಕು. ಅಭಿವ್ಯಕ್ತಿಯ ಮಟ್ಟದಲ್ಲಿ ಪರಿವರ್ತನೆಯಾಗುವುದಕ್ಕೂ ಪೂರ್ತಿ ಸಂವೇದನಾ ಸ್ತರದಲ್ಲಿ ಬದಲಾಗುವುದಕ್ಕೂ ವ್ಯತ್ಯಾಸ ಇದೆ. ಇವೆರಡೂ ಅಲ್ಲದೆ ಅಂದಂದಿನ ವಿಭಿನ್ನ ಕಾವ್ಯಮಾರ್ಗಗಳ ಸತ್ಯಾಂಶವನ್ನು ಮೈಗೂಡಿಸಿ ಕೊಳ್ಳುತ್ತ ಚಲನಶೀಲತೆಯೊಂದಿಗೆ ತನ್ನದೇ ಆದ 'ನಂಬಿಕೆ'ಯೊಳಗೆ ಸೃಜನಶೀಲತೆ ಯನ್ನು ಮುಂದರಿಸುವುದೂ ಉಂಟು. ಈ ಇಂಥ ಕಾವ್ಯ ಒಂದು ನಿರ್ದಿಷ್ಟ ತಲೆಗಟ್ಟಿಗೆ ಒಳಪಡದೇ ಇದ್ದಾಗ ಅದನ್ನು ನಮ್ಮ ಸಾಹಿತ್ಯವಿಮರ್ಶೆ 'ಸಮನ್ವಯ' ಎಂಬ ಪಾರಿಭಾಷಿಕ ಪದದ ಮೂಲಕ ಗುರುತಿಸಲು ಪ್ರಯತ್ನಿಸಿತು. ಆದರೆ ಗಂಭೀರವಾದ ಅಧ್ಯಯನ ನಡೆಸದೆ, ಮೇಲ್‌ಸ್ತರದಲ್ಲೆ ವಿವರಿಸುವಮಟ್ಟಿಗೆ ಸುಮ್ಮನಾಯಿತು. ಈ ಮಾರ್ಗದಲ್ಲಿ ತೊಡಗಿಕೊಂಡಿರುವವರನ್ನು 'ಮೈನರ್ ಕವಿ' ಗಳೆಂದು ಕರೆಯುವ ಮಟ್ಟಕ್ಕೂ ತಲುಪಿತು. ಇದು ಪ್ರಭಾವಶಾಲೀ ಪ್ರಕಾರವಾಗಿ ಬೆಳೆಯಲಿಲ್ಲ; ಆಕಾರದ ಬದಲಾವಣೆಯಾಗಿ ಮಾತ್ರ ಉಳಿಯಿತು ಎಂಬೆಲ್ಲ ಮಾತು ಗಳು ಕೇಳಿ ಬಂದವು.

'ಸಮನ್ವಯ' ಎಂದಾಕ್ಷಣ ಮೇಲಿನಂತೆ ಉಪೇಕ್ಷಿಸುವುದಾಗಲಿ ಅಥವಾ ಸ್ವತಃ ಕವಿಗಳು ಆ ಹೇಳಿಕೆಗೆ ಅಸಮ್ಮತಿ ಸೂಚಿಸುವುದಾಗಲಿ ಅಗತ್ಯವಿರಲಿಲ್ಲ ಅಂತ ಅನಿಸು ತ್ತದೆ. ಕವಿತೆ 'ಕಾಲಬದ್ಧವಾದ ಕ್ರಿಯೆಯಲ್ಲ[4]' ಅಂತಾದಾಗಲೂ, ಆಕೃತಿಯನ್ನು ಮೈಗೂಡಿಸಿಕೊಳ್ಳುವುದು ನಿರ್ದಿಷ್ಟ ಕಾಲದಲ್ಲಿ ಚಾಲ್ತಿಯಲ್ಲಿರುವಂಥ 'ಆಕೃತಿ'ಗಳನ್ನೇ

ಎಂಬುದನ್ನು ನಾವು ಮರೆಯುವಂತಿಲ್ಲ. ನಮ್ಮ ನವೋದಯ ಕಾವ್ಯ ಸಾಹಿತ್ಯವನ್ನೇ ಕೇಂದ್ರವಾಗಿಟ್ಟುಕೊಂಡು, ಧರ್ಮವನ್ನು ಪೂರಕವಾಗಿ ಸ್ವೀಕರಿಸಿತು. ನವ್ಯರು ಸಾಹಿತ್ಯದ ಮೂಲಕವೇ ಸಾಮಾಜಿಕ ಅನುಭವಕ್ಕೆ ಒಡ್ಡಿಕೊಂಡರು. ಧರ್ಮ [ Idialism ] ಮತ್ತು ಸಾಹಿತ್ಯ [ಆಶಯ]ವನ್ನು ಸಮನ್ವಯಗೊಳಿಸುವ ಪರಿಯನ್ನು ಅಡಿಗರ ಕಾವ್ಯದಲ್ಲೂ ಕಾಣುತ್ತೇವೆ. ಈ ಅರ್ಥದಲ್ಲಿ ಅಡಿಗರನ್ನೂ 'ಸಮನ್ವಯ' ಕವಿಯೆಂದು ಕರೆಯುವುದಕ್ಕೆ ಅಡ್ಡಿಯೇನೂ ಇಲ್ಲ. ಇದನ್ನೇ ಮುಂದುವರಿಸಿದ ಅಥವಾ ಇನ್ನೊಂದು ಆಯಾಮದಲ್ಲಿ ಬೆಳೆಸಿದವರು ಶಿವರುದ್ರಪ್ಪ ಮತ್ತು ಕಣವಿಯವರು. ಆದರ್ಶ ಮತ್ತು ವಾಸ್ತವವನ್ನು, ಅನುಭವ ಮತ್ತು ಅಭಿವ್ಯಕ್ತಿಯನ್ನು, ಭಾವ ಮತ್ತು ಅರ್ಥಗಳನ್ನು ತಕ್ಕ ಹದದಲ್ಲಿ, ಪಕ್ಕಾ ಪದದಲ್ಲಿ, ಸಮನ್ವಯಗೊಳಿಸಿದರು. ಮತ್ತು ಕಾಲಬದ್ಧವಾಗಿದ್ದೂ, ಕಾಲಾತೀತವಾಗಬಲ್ಲ ಜಂಗಮತ್ವವನ್ನು ದಾಖಲಿಸಿದರು. ನಿಯೋರೋಮ್ಯಾಂಟಿಸಮ್‌ಗೆ ಸಂವಾದಿಯಾಗಿ ಈ ಸಮನ್ವಯ ಪ್ರಕಾರ ಕನ್ನಡದಲ್ಲೂ ಕಾಣಿಸಿಕೊಂಡು ಬಂದಿದ್ದಿರಬಹುದೇ ಎಂಬ ಅನುಮಾನವೂ ಹುಟ್ಟುತ್ತದೆ. ಅಂದರೆ ನಮ್ಮ ಸಮನ್ವಯ ನಿಯೋರೋಮ್ಯಾಂಟಿಕ್ ಪ್ರಕ್ರಿಯೆಯಿಂದ ಪ್ರಭಾವಿತವಾಗಿ ಒಡಮೂಡಿದೆ ಎಂದು ಅರ್ಥವಲ್ಲ. ಈ ಎರಡೂ ಪ್ರಕಾರಗಳಲ್ಲಿ ಇರಬಹುದಾದ ಸಾಮ್ಯವನ್ನು ವಿಶ್ಲೇಷಿಸುವುದಕ್ಕೆ ಅವಕಾಶ ಇದೆ ಎಂಬುದನ್ನು ಸೂಚಿಸುವುದಷ್ಟೇ ನನ್ನ ಉದ್ದೇಶ[5]. ಇವೆಲ್ಲದರ ಚಿಂತನೆಯಲ್ಲಿ 'ಸಮನ್ವಯ' ಎಂಬುದು ನನ್ನ ದೃಷ್ಟಿಯಲ್ಲಿ ಮಹತ್ವ ಪಡೆದುಕೊಳ್ಳುತ್ತದೆ. ಕಟ್ಟುವುದು, ಒಂದು ಗೂಡಿಸುವುದು, ಐಕ್ಯತೆ ಸಾಧಿಸುವುದು ಮೊದಲಾದ ಪದಗಳು ಬದುಕಿನಲ್ಲಿ ಬೆಲೆ ಪಡೆದುಕೊಳ್ಳುವ ಮೌಲ್ಯಗಳಾದಂತೆ, ಸಾಹಿತ್ಯ ಪ್ರಕ್ರಿಯೆಯಲ್ಲೂ ಅಂಥವುಗಳನ್ನು ಅಪೇಕ್ಷಿಸುವುದು ಆರೋಗ್ಯಕರ ಬೆಳವಣಿಗೆ ಎಂದೇ ಭಾವಿಸಿದ್ದೇನೆ.

'...ವಾಸ್ತವವನ್ನು ಯಥಾವತ್ತಾಗಿ ಒಪ್ಪಿಕೊಳ್ಳುವ, ಗ್ರಹಿಸುವ ಹಾಗೂ ಎದುರಿಸುವ ಧೈರ್ಯವನ್ನು ಮೈಗೂಡಿಸಿಕೊಳ್ಳುವುದು, ಬದುಕಿನ ಅನುಭವಗಳನ್ನು ಶೋಧಿಸುತ್ತ ಅರಿವಿನ ಪರಿಧಿಯನ್ನು ವಿಸ್ತರಿಸುವುದು ಇವೇ ನಿಜವಾದ ಜೀವನ ಮೌಲ್ಯಗಳಾಗಬೇಕೆಂಬ ಎಚ್ಚರ ನನ್ನನ್ನು ಆವರಿಸತೊಡಗಿತು ... ಈ ಪರಿಸರದಲ್ಲಿ ವ್ಯಕ್ತಿವ್ಯಕ್ತಿಗಳ ನಡುವೆ ಸೇತುವೆ ಕಟ್ಟುವುದು ಹೇಗೆ, ಮಾನವೀಯ ಸಂಬಂಧಗಳನ್ನು ಬೆಸೆಯುವುದು ಹೇಗೆ–ಇತ್ಯಾದಿ ಚಿಂತನೆಗಳು ಕಳೆದ ಹಲವಾರು ವರ್ಷಗಳಿಂದಲೂ ನನ್ನ ಕಾವ್ಯನಿರ್ಮಿತಿಯ ಹಿಂದೆ ಕೆಲಸ ಮಾಡುತ್ತಿವೆ'.

[ಜಿ. ಎಸ್. ಎಸ್. : ಚತುರಂಗ ಪು. ೪೬]

'ನಿಯತವಾದ ಪದ್ಯಬಂಧಗಳನ್ನು ಮುರಿದು, ಅಂದಿನ ಕವಿಗಳ ಪ್ರಯೋಗ ಪರಿಣತಿ, ಆಡುಮಾತಿನ ಮುಕ್ತ ಛಂದೋವಿಧಾನಗಳಲ್ಲಿ ಪ್ರಕಟವಾಗತೊಡಗಿತ್ತು. ಈ ಪ್ರಯೋಗಗಳ ಪರಿಣಾಮದಿಂದ ನನ್ನ ಕಾವ್ಯದ ರೂಪಾಂಶಗಳಲ್ಲಿ ತಕ್ಕ ಮಟ್ಟಿಗಿನ ಬದಲಾವಣೆಗಳು ಉಂಟಾದರೂ, ನನ್ನ ಒಳಮನಸ್ಸು ಮಾತ್ರ ಬೇರೊಂದು ಬಗೆಯ ಚಿಂತನೆಯಲ್ಲಿ ತೊಡಗಿತ್ತು. ಕಾಲ ಮತ್ತು ಮನುಷ್ಯ, ಭೂಮಿ ಮತ್ತು ಮನುಷ್ಯ ಈ ಎರಡರ ಸಂಬಂಧಗಳನ್ನು ಕುರಿತ ವಿಚಾರಗಳು ನನ್ನನ್ನು ಕಾಡ ತೊಡಗಿದ್ದವು ... ಬದುಕಿನ ಆದರ್ಶ ಹಾಗೂ ವಾಸ್ತವಗಳ ಸಂಘರ್ಷಗಳಿಗೆ ರೂಪುಕೊಟ್ಟಂಥ ಕೃತಿಯಾಗಿದೆ.

[ಜಿ. ಎಸ್. ಎಸ್. : ಚತುರಂಗ ಪು. ೪೫]

'ಸಮನ್ವಯ, ಕಣವಿಯವರಿಗೆ ಅತ್ಯಂತ ಇಷ್ಟವಾದ ನಿಲುವೆಂದು ತೋರುತ್ತದೆ. ಈ ಸಮನ್ವಯವು ವಿಚಾರಗಳಲ್ಲಿ ಮಾತ್ರವಲ್ಲದೆ ಒಳ-ಹೊರಗೆ, ನುಡಿ-ನಡೆಗಳಲ್ಲಿ ಮತ್ತು ವ್ಯಕ್ತಿ-ಸಮಷ್ಟಿಗಳ ನಡುವೆ ಒಡಮೂಡಬೇಕೆನ್ನುವುದು ಅವರ ವಿಚಾರವಾಗಿರಬಹುದು ... ಕಣವಿಯವರನ್ನು ಕನ್ನಡ ಕಾವ್ಯದ ಬದಲಾಗುತ್ತಿರುವ ಸಂವೇದನೆಗಳ ಒಂದು ಉತ್ತಮ ಉದಾಹರಣೆ ಎಂದು ಹೇಳಬಹುದು'.

[ಜಯಸುದರ್ಶನ : 'ಚೆಂಬೆಳಕು' ಪು. ೫೦೩]

'ವಾಸ್ತವಪ್ರಜ್ಞೆ, ಆತ್ಮವಿಮರ್ಶೆ, ಕಲಾಜಾಗ್ರತಿ, ಸೂಕ್ಷ್ಮವಾದ ವ್ಯಂಗ್ಯಧಾಟಿ, ನೂತನ ಛಂದಃಪ್ರಯೋಗ-ಇವು ಕೆಲಮಟ್ಟಿಗೆ ಕಂಡುಬಂದ ವ್ಯತ್ಯಾಸಗಳು, ಜೀವನ ಪ್ರೀತಿ, ಅತಿಯಲ್ಲದ ಆಶಾವಾದ, ಪ್ರಕೃತಿಪ್ರೇಮ, ಅಂತಃಶ್ರದ್ಧೆ, ಶುಚಿ ಪರಾಯಣತೆ, ಗುಣಸ್ವೀಕಾರದೃಷ್ಟಿ, ದೇಸಿಯ ಬಳಕೆ-ಇವು ನನ್ನ ಎರಡೂ ಬಗೆಯ ಪದ್ಯಗಳಿಗೆ ಸಮಾನವಾಗಿರತಕ್ಕ ಅಂಶಗಳು'.

[ಕಣವಿ : ಚೆಂಬೆಳಕು ಪು. ೫೦೭]

ಕಣವಿ, ಶಿವರುದ್ರಪ್ಪನವರ ನಿಲುವಿನಲ್ಲಿ ಸಮಾನ ಬಿಂದುವೊಂದಿದ್ದು ಇಬ್ಬರ ಕಾವ್ಯವೂ ಸಮನ್ವಯವನ್ನು ಅರ್ಥಪೂರ್ಣವಾಗಿ ಸಾಧಿಸುತ್ತದೆ ಎಂಬುದರಲ್ಲಿ ಅನುಮಾನವಿಲ್ಲ.

* * *

'ಸಾಹಿತ್ಯ ಜೀವನಪ್ರೀತಿಯ ವಿಸ್ತರಣೆ ಮಾತ್ರವಲ್ಲ, ಮಾನವೀಯ ಸಂಬಂಧಗಳ ವಿಸ್ತರಣೆ ಕೂಡಾ'

'ಅಂದಿನ ಅನುಭವದಿಂದ ಕವಿತೆಯೊಂದು ಮೂಡುವಂತೆ ತೋರಿದರೂ ಸಹ ಅದು ರೂಪುಗೊಳ್ಳುವಾಗ ಒದಗುವ ಅನುಭವ ಅಂದಿನದು ಮಾತ್ರ ಆಗಿರುವುದಿಲ್ಲ. ... ಹೀಗಾಗಿ ಕವಿತೆ ಕಾಲಬದ್ಧವಾದ ಕ್ರಿಯೆಯಲ್ಲ, ಕಾಲಾತೀತದಲ್ಲಿ ಸಂಭವಿಸುವ ಒಂದು ವಿಸ್ಮಯ' ಎಂದು ನಂಬಿರುವ ಶಿವರುದ್ರಪ್ಪನವರ ಕಾವ್ಯದ ಮೂಲ ಸೆಲೆ ಇರುವುದು 'ಭಾವ'ದಲ್ಲಿ. ಅಂದರೆ ಭಾಷೆಯ ಮೂಲಕ ಅನುಭವವನ್ನು ಕಡೆದಿಡುವುದನ್ನು ಅವರ ಮೊದಮೊದಲ ಕವಿತೆಗಳಲ್ಲಿ ಕಾಣುತ್ತೇವೆ. ಸೂಕ್ಷ್ಮಾತಿಸೂಕ್ಷ್ಮ ಸಂವೇದನೆಗಳನ್ನು ತೆಕ್ಕೆಗೆ ಒಗ್ಗಿಸಿಕೊಳ್ಳಬಲ್ಲ ಭಾಷೆಯ ನೆಯ್ಗೆಯನ್ನು, ಭಾವವನ್ನು ಪ್ರತಿಮಿಸುವ ಆಕೃತಿಯನ್ನು ಬಳಸುವುದನ್ನು ಗಮನಿಸಬಹುದು.

ಎದೆಯ ಭಾವ ಹೊಮ್ಮುವುದಕೆ
ಭಾಷೆ ಓಂದು ಸಾಧನ

ಎಂದು ಭಾವಿಸುವ ಕವಿ ಭಾವ–ಭಾಷೆಗಳೆರಡನ್ನೂ ಅಭಿನ್ನವಾಗಿ ಕಾಣುತ್ತಾರೆ. ಭಾವದ ಆರ್ದ್ರತೆಯ ಗತಿ, ವಿನ್ಯಾಸಗಳನ್ನು ಭಾಷೆಯ ಲಯ, ನಾದಗಳಲ್ಲಿ ಹಿಡಿದಿಡಲು ತೊಡಗುತ್ತಾರೆ, ಮತ್ತು ಅದರ ಗುಂಗಿನಲ್ಲಿ ತನ್ಮಯಗೊಳ್ಳುತ್ತಾರೆ.

ಹಾಡು, ಹೃದಯ ತೆರೆದಿದೆ
ಹಾಡಿನಲ್ಲಿ ಲೀನವಾಗ
ಲೆನ್ನ ಮನವು ಕಾದಿದೆ

ಭಾವಗೀತೆಯ ಬಂಧನಿರ್ಮಾಣದಲ್ಲಿ, ಅಚ್ಚುಕಟ್ಟಾದ ಪ್ರತಿಮೆಯೊಂದನ್ನು ರೂಪಿಸುವುದರಲ್ಲಿ ಶಿವರುದ್ರಪ್ಪ ಸಫಲತೆ ಸಾಧಿಸುತ್ತಾರೆ. ಅವರ 'ತೃಪ್ತಿ' ಕವಿತೆ ಹಾಡಿನಿಂದ ತೊಡಗಿ ಅದೇ 'ಹಕ್ಕಿ'ಯಾಗುವ ವಿನ್ಯಾಸ ಬೆರಗು ಹುಟ್ಟಿಸುತ್ತದೆ, ಹಾಡುವುದೇ ಹಕ್ಕಿಯ ಸಹಜಧರ್ಮವಾದ್ದರಿಂದ ಅದಕ್ಕೆ ಅದು 'ಅನಿವಾರ್ಯಕರ್ಮ'ವಾಗುತ್ತದೆ. ಈ ಇಡೀ ಕವಿತೆ ಶಿವರುದ್ರಪ್ಪನವರ ಕಾವ್ಯ ಸೃಷ್ಟಿಯ ಪ್ರಕ್ರಿಯೆಗೆ ಹೇಗೆ ಉದಾಹರಣೆ ಆಗಬಲ್ಲುದೊ, ಕಾವ್ಯಮೀಮಾಂಸೆಯ ನೆಲೆಯಲ್ಲೂ ಕೆಲಸ ಮಾಡುತ್ತದೆ. 'ಮೈದುಂಬಿ' ಎಂಬ ಪದ ಭಾಷೆಯ ಕಾವ್ಯಾತ್ಮಕತೆಯನ್ನು, ಸೃಜನಶೀಲತೆಯ ಹಿಂದಿರುವ ಪ್ರೇರಣೆ[ಆವೇಶ]ಯನ್ನು ಸೂಚಿಸುತ್ತದೆ. ಜಾರ್ಜ್‌ಥಾಮ್‌ಸನ್ ಹೇಳುವ 'ಭಾವಪೂರಿತ ಭಾಷೆಯು ಅವನನ್ನು ಕಾಲ್ಪನಿಕ ಲೋಕದಿಂದ ವಸ್ತುಲೋಕದ ಹತ್ತಿರಕ್ಕೆ ಕೊಂಡೊಯ್ಯಲು ನೆರವಾಗುತ್ತದೆ'. ಎಂಬ ಮಾತನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. 'ಕವಿ ತನ್ನ ಅನುಭವಜನ್ಯ ಭಾವ ಇಲ್ಲವೇ ಅರ್ಥಗಳನ್ನು ಭಾಷಿಕವಾಗಿ ನಿರೂಪಿಸುತ್ತಾರೆ. ಆ ಮೂಲಕ ಅನುಭವದ ಗ್ರಹಿಕೆಯನ್ನು ಕವಿತೆಯ ರಚನೆಯ ಮೂಲಕ ದಾಖಲಿಸಿ ಬಿಡುಗಡೆ ಮಾಡುತ್ತಾರೆ.[6]

ಸಾಮಗಾನ, ಚೆಲುವು ಒಲವು, ದೇವಶಿಲ್ಪ ಸಂಕಲನಗಳಲ್ಲಿ ಈ ಬಗೆಯ ಕವಿತೆಗಳನ್ನು ವಿಶೇಷವಾಗಿ ನೋಡುತ್ತೇವೆ. 'ಯಥಾರ್ಥತೆಯ ಆದರ್ಶೀಕರಣವೇ ಕವಿತೆಯ ಉದ್ದೇಶ' ಎಂದು ಬೆಲಿನ್‌ಸ್ಕಿ ಹೇಳುತ್ತಾನೆ. ಗಾರ್ಕಿ ಕೂಡ 'ಕಲೆ ಯಥಾರ್ಥತೆಯನ್ನು ಮೀರಿ ಎತ್ತರಕ್ಕೆ ಬೆಳೆದು, ವ್ಯಕ್ತಿ ಆ ಯಥಾರ್ಥತೆಯಿಂದ ಬೇರ್ಪಡದಂತೆ ಮಾಡಿ ಆತನನ್ನು ಕಾಪಾಡಬೇಕು' ಎನ್ನುತ್ತಾನೆ. ಈ ದೃಷ್ಟಿಯಿಂದ ಶಿವರುದ್ರಪ್ಪ ಅನುಭವಜನ್ಯ ಭಾವಲೋಕಕ್ಕೂ, ವಾಸ್ತವಲೋಕಕ್ಕೂ ಬೆಸುಗೆ ಹಾಕುತ್ತಾರೆ. ನಿಸರ್ಗ ಮತ್ತು ಅದರ ಫಲವಂತಿಕೆ, ನಿಗೂಢತೆ ಈ ಕವಿಯ ಅನುಭವವನ್ನು ಗಾಢವಾಗಿ ಆವರಿಸಿವೆ. ಹಾಗಾಗಿಯೇ ಮತ್ತೆ ಮತ್ತೆ ಪ್ರಕೃತಿಯ ವೈವಿಧ್ಯಮಯ, ಲಯ, ವಿನ್ಯಾಸಗಳನ್ನು 'ಶಾಬ್ದಿಕ'ದಲ್ಲಿ ಗ್ರಹಿಸುತ್ತಾರೆ; ಅಥವಾ 'ಪದಸಂಯೋಜನೆ'ಯ ಮೂಲಕವೇ ಗ್ರಹಿಸುವ ಕೆಲಸವನ್ನು ನಡೆಸುತ್ತಾರೆ. ವಸ್ತು ಪ್ರಪಂಚದ ಪ್ರಮುಖ ಗ್ರಹಿಕೆಯಾದ ಅರ್ಥವನ್ನು 'ಭಾವ'ದ ಆವರಣದಲ್ಲಿಟ್ಟು ಸಂವಹನಿಸುವುದು ಅವರಿಗೆ ಮುಖ್ಯವಾಗುತ್ತದೆ.

'ಒಂದು ಕಡೆ ಲೋಕದ ಪ್ರಧಾನ ಶ್ರುತಿಯನ್ನು ಲಯಗಳನ್ನು ಗ್ರಹಿಸಿ, ಅದರೊಡನೆ ತನ್ನ ಕವಿತೆಯನ್ನು ಮೇಳನಗೊಳಿಸುವುದು, ಈ ಬಗೆಯ ಕವಿತೆಗಳ ಬಂಧ ನಿಯತ ಹಾಗೂ ಸಂವೃತ ಅಂದರೆ ಅರ್ಥನಿಯತಿ ಹಾಗೂ ಭಾವಸಂವಹನ ಕವಿತೆಯ ಮುಖ್ಯ ನೆಲೆಯಾಗುತ್ತದೆ' ಎನ್ನುವ ಕೆ. ವಿ. ನಾರಾಯಣರ ಮಾತನ್ನು ಉದಾಹರಿಸಬಹುದು.

'ದೀಪದ ಹೆಜ್ಜೆ'ಯ ಮತ್ತು ನಂತರದ ರಚನೆಗಳಲ್ಲಿ 'ಅರ್ಥ'ದ ಕಡೆಗೆ ಹೆಚ್ಚಿನ ಒತ್ತುಕೊಡುವ ಪ್ರಯತ್ನವಿದೆ. ಶಬ್ದದ ಮುಖಾಂತರ ಅನುಭವದ ಅರ್ಥವನ್ನು ಹಿಡಿದು ಕಟ್ಟುವ ಪ್ರಯೋಗದತ್ತ ಸರಿದರು. ಭಾವುಕತೆಯನ್ನು ಹಿಂದಿಟ್ಟು ವೈಚಾರಿಕತೆಯ ಕಡೆಗೆ ಬರಬೇಕೆಂಬ ಹಂಬಲದಲ್ಲಿ ಕಾವ್ಯವನ್ನು ದುಡಿಸಿಕೊಂಡಿದ್ದು ವ್ಯಕ್ತವಾಗುತ್ತದೆ. 'ಅತಿಯಾದ ಭಾವುಕತೆಯಾಗಲಿ, ಆದರ್ಶಗಳಾಗಲಿ, ಕೇವಲ ದೊಡ್ಡ ದೊಡ್ಡ ಮಾತುಗಳಾಗಲಿ ಎಷ್ಟೊಂದು ಪೊಳ್ಳು ಎಂದು ಅನಿಸತೊಡಗಿತ್ತು ...... ವಾಸ್ತವವನ್ನು ಯಥಾವತ್ತಾಗಿ ಒಪ್ಪಿಕೊಳ್ಳುವ, ಗ್ರಹಿಸುವ ಹಾಗೂ ಎದುರಿಸುವ ಧೈರ್ಯವನ್ನು ಮೈಗೂಡಿಸಿಕೊಳ್ಳುವುದು, ಬದುಕಿನ ಅನುಭವ ಶೋಧಿಸುತ್ತ ಅರಿವಿನ ಪರಿಧಿಯನ್ನು ವಿಸ್ತರಿಸುವುದು ಇವೇ ನಿಜವಾದ ಜೀವನ ಮೌಲ್ಯಗಳಾಗಬೇಕೆಂಬ ಎಚ್ಚರ ನನ್ನನ್ನು ಆವರಿಸತೊಡಗಿತು'[7] ಎಂದು ಸ್ವತಃ ಕವಿಯೇ ಹೇಳಿಕೊಂಡಿದ್ದಾರೆ. ಪದ್ಯದ ಲಯ ಬಿಟ್ಟು ಕೊಟ್ಟು ಗದ್ಯದ ಲಯವನ್ನು ತೊಡಿಸಿದ ಹಲವು ರಚನೆಗಳಲ್ಲಿ ಕವಿ ಶಿಲ್ಪಕ್ಕೆ ಬಂಧಕ್ಕೆ ವಿಶೇಷ ಮಹತ್ವ ಕೊಟ್ಟ

ಹಾಗೆ ಕಾಣುವುದಿಲ್ಲ. ಅಂದರೆ ಅಂಥ ರಚನೆಗಳಲ್ಲಿ ತೀರಾ ಶಿಥಿಲ ಎಂದಾಗಲಿ, ಹಗುರು ಎಂದಾಗಲಿ ಹೇಳುವುದು ನನ್ನ ಉದ್ದೇಶ ಅಲ್ಲ. ಕೆಲವು ಸಲ ವಸ್ತುವಿನ ಕಾವ್ಯಾತ್ಮಕತೆಯನ್ನು ರೂಪದ ನೆಲೆಯಲ್ಲಿ ತರಲು ಸಾಧ್ಯವಾಗದೇ ಹೋಗಿದೆ. 'ಕವಿ ಕವನದ ಬಂಧದ ಮೂಲಕವೇ ಅರ್ಥವನ್ನು ಗ್ರಹಿಸುವ ಇನ್ನೊಂದು ಹಾದಿಯನ್ನು ಹಿಡಿಯುವದಿಲ್ಲವಾದ್ದರಿಂದ ಅವರ ಕವಿತೆಗಳಲ್ಲಿ ಸಹಜವಾಗಿಯೇ ಬಂಧದ ನೆಲೆಯ ಪ್ರಯೋಗಗಳು ಅನವಶ್ಯಕವಾಗುತ್ತವೆ'[8] ಎಂಬ ಸಮರ್ಥನೆಯೂ ಬಂದಿರುವುದನ್ನು ಗಮನಿಸಬಹುದು. ಆದರೆ ಇದು ಸರಿಯಾದ ಸಮರ್ಥನೆ ಅಲ್ಲ.

ಇಷ್ಟಾಗಿಯೂ ಭಾವಗೀತೆಗಳ ಮತ್ತು ಚಿಕ್ಕ ರಚನೆಗಳಲ್ಲಿ ಸಾಧಿಸಿದ 'ಶಿಲ್ಪ'ದ ಬಿಗಿ ಅವರ ಇತರ ಕವಿತೆಗಳಲ್ಲಿ ಮತ್ತು ದೀರ್ಘಕವನಗಳಲ್ಲಿ ಕಾಣುವುದು ಸಾಧ್ಯವಾಗಿಲ್ಲ ಎಂಬುದನ್ನು ಹೇಳಲೇಬೇಕಾಗುತ್ತದೆ. ಆದರೆ 'ಹುಟ್ಟಿದ ಹಬ್ಬ', 'ನೆರಳಿಲ್ಲದ ದಾರಿ', 'ಗಡಿಯಾರದಡಿಯಲ್ಲಿ', 'ಮಬ್ಬಿನಿಂದ ಮಬ್ಬಿಗೆ' 'ಪ್ರಶ್ನೆ' ಮೊದಲಾದುವುಗಳು ಅಪವಾದವಾಗಿವೆ. ಅರ್ಥಸಂಕೀರ್ಣತೆಯಾಗಲಿ, ಅಸ್ಪಷ್ಟತೆಯಾಗಲಿ, ಸಂದಿಗ್ಧತೆಯಾಗಲಿ, ಅವರ ಕವಿತೆಗಳಲ್ಲಿ ಎದ್ದು ಕಾಣುವ ಗುಣವಾಗಿಲ್ಲ. ಮತ್ತು ಶಿವರುದ್ರಪ್ಪ 'ಕಾವ್ಯರಚನೆ ವ್ಯಕ್ತಿತ್ವದ ಒಂದು ಹೊರಚಾಚಾಗಿರುವ ಕವಿ'[9]ಯಾದ್ದರಿಂದ ಸರಳತೆಯ ಮಾರ್ಗವನ್ನೇ ಆಯ್ದುಕೊಂಡಿದ್ದಾರೆ. ಅಂದರೆ ಕಾವ್ಯಾನುಭವ 'ತತ್‌ಕ್ಷಣ'ಕ್ಕೆ ಮಾತ್ರ ಬದ್ಧವಾದದ್ದು ಎಂದೇನೂ ಭಾವಿಸಲಾಗದು, ಶಬ್ದಾಡಂಬರವಾಗಲಿ, ವಾಗ್ವೈಖರಿಯಾಗಲಿ ಶಿವರುದ್ರಪ್ಪನವರ ಖಯಾಲಿಯಾಗಿಲ್ಲ. ಪ್ರವಾದಿಯ ಹಾಗೆ ಮಾತನಾಡದೆ, ಮೆಲುದನಿಯಲ್ಲಿ ಮಾತನಾಡುವುದು ಅವರ ಕಾವ್ಯದ ಗುಣ, ಅದಕ್ಕೆ ತಕ್ಕ ಬಂಧವೂ ಸಹ ನಿರಬ್ಬರತೆಯಲ್ಲಿ, ಪ್ರಖರರಾಹಿತ್ಯದಲ್ಲಿ ಒಡಮೂಡುತ್ತದೆ. ಹಾಡುಗಳಲ್ಲಿ, ನೈಸರ್ಗಿಕ ಗೀತೆಗಳಲ್ಲಿ ಸಾಧಿಸಿದ ಗೇಯತೆ, ಶಿಲ್ಪಸಾಂದ್ರತೆ ಸಾಮಾಜಿಕ ವಸ್ತುವನ್ನೊಳಗೊಂಡ ಕವಿತೆಗಳಲ್ಲಿ ಸಾಧ್ಯವಾಗದಿರುವುದಕ್ಕೆ ಕಾರಣ ಕೂಡ ಇದೇ ಆಗಿದೆ. ಮತ್ತು ಶಿಲ್ಪ-ವಿನ್ಯಾಸಗಳಲ್ಲಿ ವಿವಿಧ ಪ್ರಯೋಗಗಳನ್ನು ಅವರು ನಡೆಸುವುದಿಲ್ಲ. ಯಾಕೆಂದರೆ ಪ್ರಯೋಗಪ್ರಿಯತೆ ಅವರ ಜಾಯಮಾನ ಅಲ್ಲ. ಕನ್ನಡ ಕವಿತೆ ಸಾಗಿಬಂದ ನೆಲೆಗಳುದ್ದಕ್ಕೂ ಒಳಗಾಗುತ್ತ, ಪ್ರತಿಕ್ರಿಯಿಸುತ್ತ ಮತ್ತು ಯಾವುದರಲ್ಲೂ 'ಸ್ಥಾವರ'ವಾಗದೆ ತಮ್ಮದೇ ಆದ ಮಾರ್ಗದಲ್ಲಿ ಮುಂದುವರಿದು ಜೀವಂತಿಕೆಯನ್ನು ಉಳಿಸಿಕೊಂಡಿದ್ದಾರೆ. ಆದ್ದರಿಂದ ಅವರಿಗೆ 'ಕಾವ್ಯ'ವೆನ್ನುವುದು ಕಂಡುಕೊಳ್ಳುವ, ತಲುಪುವ, ಅನುಭವ ಪಡೆಯುವ ಒಂದು ಮಾರ್ಗವಾಗಿರುವುದರಿಂದಲೆ ಇಲ್ಲಿ ಎಲ್ಲವನ್ನೂ ಬದಲಿಸಬೇಕೆಂಬ ಹಟವಾಗಲಿ, ಓದುಗನನ್ನು ಮಂತ್ರಮುಗ್ಧನನ್ನಾಗಿ ಮಾಡಬೇಕೆಂಬ ಹಂಬಲವಾಗಲಿ ಕಾಣಿಸುವದಿಲ್ಲ. ಈ ಕವಿ ಮೆರವಣಿಗೆ, ಘೋಷಣೆ, ಗದ್ದಲಗಳಿಂದ ದೂರ ನಿಂತು ನೋಡುವವರು ತನ್ನದೇ ಆದ

ಗತಿಯಲ್ಲಿ ಸಾಗುವವರು ...... ಇಂತ ಕವಿ ದ್ವಂದ್ವಗಳನ್ನು ಗುರುತಿಸುತ್ತಾರೆಯೇ ಹೊರತು ಒಂದನ್ನು ನಾಶಪಡಿಸುವುದಕ್ಕೆ ಇನ್ನೊಂದನ್ನು ಉಪಯೋಗಿಸುವುದಿಲ್ಲ[10].

ಕಣವಿಯವರ ಕಾವ್ಯ ಜೀವನದ ಗತಿಯಲ್ಲಿ ಸ್ಥಿತ್ಯಂತರಗಳಾಗಿರುವುದನ್ನು ಈಗಾಗಲೇ ಸಾಹಿತ್ಯ ವಿಮರ್ಶೆ ಗುರುತಿಸಿದೆ. ಅದಕ್ಕೆ ಮುಖ್ಯ ಕಾರಣ ಕವಿಯ ಈ ನಂಬಿಕೆ.

'ನೀನಾಗಿ ಕೊರೆಯದಿರು ದಾರಿಯನು ಬಯಲ ಬಿಡುಗಡೆ ನುಂಗಿ
ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ'

ಆದ್ದರಿಂದ ಅವರು ಬದುಕಿನ ಜತೆ ಜತೆಗೇ ಕಾವ್ಯವನ್ನೂ ಮುನ್ನಡೆಸಿಕೊಂಡು ಬಂದರು. ಜೀವನಾನುಭವವನ್ನೂ, ಕಾವ್ಯಾನುಭವವನ್ನೂ ಒಟ್ಟೊಟ್ಟಿಗೇ ಮೇಳೈಸುವಲ್ಲಿ, ಧ್ವನಿಸುವಲ್ಲಿ, ತಾದಾತ್ಮ್ಯ ಸಾಧಿಸಿದರು. 'ದೀಪಧಾರಿ'ಯಲ್ಲಿ ಕವಿಯೇ ಹೇಳಿಕೊಂಡ ಮಾತುಗಳನ್ನು ಗಮನಿಸಿ, ಅಷ್ಟರಿಂದಲೇ ಅವರ ಕಾವ್ಯದ ಬಗ್ಗೆ ವ್ಯಾಖ್ಯಾನಿಸ ಹೊರಟವರೂ ಇದ್ದಾರೆ. ಅಂದರೆ ನವೋದಯ ಮತ್ತು ನವ್ಯದ ನಡುವೆ ಸೇತುವೆ ನಿರ್ಮಾಣದ ಹಂತಕ್ಕಷ್ಟೇ ಕಣವಿ ತಮ್ಮ ಕಾವ್ಯವನ್ನು ಮುಡುಪಾಗಿಟ್ಟರು ಎನ್ನುವುದು. ಆದರೆ ಇದು ಕೇವಲ ಆ ಕಾಲದ ವಿಮರ್ಶೆ ಮತ್ತು ವಿಮರ್ಶಕರ ಪಾರ್ಶ್ವ ನೋಟವಷ್ಟೇ ಆಗಿತ್ತು ಎಂಬುದನ್ನು ಹೇಳಲೇಬೇಕಾಗಿದೆ. ಯಾಕೆಂದರೆ ಕಣವಿಯವರು ತಮ್ಮ ಅನುಭವ ದ್ರವ್ಯವನ್ನು ಪೂರ್ತಿಯಾಗಿ ಬದಲಾಯಿಸಿಕೊಳ್ಳದಿದ್ದರೂ ಅಭಿವ್ಯಕ್ತಿಯನ್ನೂ ಸಹ ಮೂಲ ಅನುಭವಕ್ಕೆ ನಿಷ್ಠರಾಗಿ ಉಳಿಸಿಕೊಂಡಿರುವುದನ್ನು ಗ್ರಹಿಸಬಹುದು. ಅಂದರೆ ಅನುಭವಜನ್ಯವಾದ ಭಾವ ಅಥವಾ ಅರ್ಥಕ್ಕೂ ಅದನ್ನು ಆಕೃತಿ ಗೊಳಿಸುವ 'ರೂಪ'ಕ್ಕೂ ಅಂತರವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಅವರ 'ಕಾವ್ಯಾಕ್ಷಿ' ಯಿಂದ 'ದೀಪಧಾರಿ' ಸಂಕಲನದ ತನಕ ಕಂಡಿರಿಸಬಹುದು. ಭಾವ ಮತ್ತು ಭಾಷೆಗಳಲ್ಲಿ ಬಿಗಿ ಹೊಂದಿಕೆ ಸಾಧಿಸುವುದರಿಂದಲೇ ಕಣವಿ ಒಂದು ಕವಿತೆಯನ್ನು ಸಾವಯವ ಸಂಬಂಧದಲ್ಲಿ ಕಡೆಯುವಲ್ಲಿ ಸಫಲತೆ ಸಾಧಿಸುತ್ತಾರೆ. ಅವರ ಭಾವಗೀತ ಮತ್ತು ಸಾನೆಟ್‌ಗಳು ಇದನ್ನು ಸಾಬೀತು ಪಡಿಸುತ್ತವೆ.

ಪ್ರಕೃತಿ ಕಣವಿಯವರನ್ನು ದಟ್ಟವಾಗಿ ಕಾಡಿದೆ. ಬಹುಶಃ ಎಲ್ಲ ನವೋದಯ ಕವಿಗಳೂ ಸಹ ಒಂದಲ್ಲ ಒಂದು ರೀತಿಯಲ್ಲಿ ನಿಸರ್ಗದ ನಡುವೆಯೇ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ. ಕೇವಲ ಪ್ರಾಸಕ್ಕಾಗಿ ಪ್ರಾಸವನ್ನು ಜೋಡಿಸಿದೆ ಅದಕ್ಕೊಂದು ಅರ್ಥವನ್ನು ಒದಗಿಸುತ್ತಾರೆ. ಬಹು ಹಿಂದೆಯೇ ಬರೆದ 'ಗಿರಿಗಿರಿ

ಗಿಂಡಿ' ಮತ್ತು ಇತ್ತೀಚಿನ 'ಯಾರು ಕೇಳುತ್ತಾರೆ, ಹೇಳಿರಣ್ಣ' ಕವಿತೆಗಳನ್ನು ನೋಡಬಹುದು. ಮೊದಲನೆಯದು ಮಕ್ಕಳ ಬುಗುರಿಯಾಟದ ಲಯ, ವಿನ್ಯಾಸಗಳಲ್ಲಿ ಮೂಡಿ ನಿಂತಿದ್ದರೆ. ಎರಡನೆಯದು ನಾದಕ್ಕೆ ಮುಖವಾಡಿಯೂ ವ್ಯಂಗ್ಯದ ಘಾಟನ್ನು ಇಟ್ಟುಕೊಂಡಿದೆ. ಶಬ್ದಶರೀರವನ್ನು ಭಾವ, ಅರ್ಥಗಳಿಗೆ ಒಗ್ಗಿಸುವಾಗ ಕೃತ್ರಿಮತೆಗಿಂತಲೂ, ಸಹಜತೆಯೇ ಹೆಚ್ಚು ಕೆಲಸ ಮಾಡುತ್ತದೆ. ಹಾಗಾಗಿ ಇಡೀ ಭಾಷೆಯನ್ನು ಹದಗೊಳಿಸುವ, ಮಿದುಗೊಳಿಸುವ ಮತ್ತು ಇಡೀ ಇಳಿದನಿಯಲ್ಲೇ ಮಾತನಾಡುವ ಕಸಬುಗಾರಿಕೆ ಅವರದು. ಪ್ರಕೃತಿ ಚಿತ್ರವನ್ನು ಕೊಡುವಾಗ ಅಥವಾ ಸಾಮಾಜಿಕ ಅನುಭವವನ್ನು ಮುಂದಿಡುವಾಗ ಕಣವಿ ತಮ್ಮ ಸುತ್ತಲಿನ ಪರಿಸರದಿಂದ ಅನಾಮತ್ತಾಗಿ ಎತ್ತಿಕೊಂಡ ಪ್ರತಿಮೆ, ರೂಪಕ, ಪ್ರತೀಕಗಳನ್ನು ಬಳಸುತ್ತಾರೆ. ಉತ್ತರ ಕರ್ನಾಟಕದ ಆಡುಮಾತನ್ನು, ನುಡಿಗಟ್ಟನ್ನು ನಿರಾಳವಾಗಿ ಪ್ರಯೋಗಿಸುತ್ತಾರೆ. ಬೇಂದ್ರೆಯವರ ನಂತರ ಇಷ್ಟೊಂದು ಸಮೃದ್ಧವಾಗಿ ಮತ್ತು ವ್ಯಾಪಕವಾಗಿ ಜಾನಪದ ಸಂವೇದನೆ ಹಾಗೂ ಭಾಷೆಯನ್ನು ಬಳಸಿದವರು ಕಣವಿಯವರೇ ಎಂದು ಹೇಳಿದರೆ ಅದು ಖಂಡಿತಾ ಉತ್ಪ್ರೇಕ್ಷೆ ಆಗುವುದಿಲ್ಲ. ಹಾಗೆ ನೋಡಿದರೆ ಕಂಬಾರರಿಗಿಂತ ಹೆಚ್ಚು ಜೀವಂತವಾದ ಜಾನಪದ ಪ್ರಜ್ಞೆ ಕಣವಿಯವರದು. ಇಡಿಯಾಗಿ ಸಂವೇದನೆಯನ್ನೇ ಮತ್ತು ಅದಕ್ಕುಚಿತವಾದ ಆಕೃತಿಯನ್ನೇ ಇವರು ಬಳಸುವುದರಿಂದ ನಿಜವಾದ 'ಪ್ರಾದೇಶಿಕತೆ'ಯನ್ನು ಕೃತಿಯಲ್ಲಿ ಕೆತ್ತಿಡಲು ಸಾಧ್ಯವಾಗಿದೆ.

ಭಾವಗೀತದ ಲಯವನ್ನು ಹೊರತು ಪಡಿಸಿದ ಸಾಮಾಜಿಕ ವಸ್ತುವನ್ನೊಳಗೊಂಡ ಕವಿತೆಗಳಲ್ಲೂ ಸಹ ತನ್ನ ಮೂಲಭೂತ ಸಂವೇದನೆಯಾದ 'ಭಾವಶಿಲ್ಪ'ವನ್ನು ಕಟೆಯಲು ಈ ಕವಿ ಮರೆಯುವುದಿಲ್ಲ. ಆದ್ದರಿಂದ 'ರಂಜನಾ', 'ನಗರದಲ್ಲಿ ನೆರಳು' 'ಎರಡು ದಡ' 'ಕೊನೆಯ ನಿಲ್ದಾಣ'ಗಳಂತ ರಚನೆಗಳಲ್ಲೂ ಸಹ 'ಅರ್ಥ'ಕ್ಕಿಂತ 'ಭಾವ'ವೇ ಮುಂದಾಗಿ ಬಿಡುವುದನ್ನು ನೋಡಬಹುದು. ಈಗಿತ್ತಲಾಗಿನ ಕಣವಿಯವರು 'ಗದ್ಯ'ತನವನ್ನು ಕವಿತೆಗಳಲ್ಲಿ ತರಲು ಪ್ರಯತ್ನಿಸಿರುವುದನ್ನು, ಆದಕ್ಕಾಗೇ ಕೆಲವು ಸಲ 'ಹೇಳಿಕೆ' ಗಳಂತೆ ವಾಕ್ಯವನ್ನು ರಚಿಸಲು ಪ್ರಯತ್ನಿಸಿದ್ದೂ ಇದೆ. ಆದರೆ ಅವರ ಕಾವ್ಯದ ಬೇರುಗಳು 'ಭಾವ' ದಲ್ಲಿರುವುದರಿಂದ ಇಂತ ಗದ್ಯಗಳೂ ಸಹ ಪದ್ಯದ ಸಂವೇದನಾ ಶೀಲತೆಯನ್ನು ಸೌಂದರ್ಯ ಪ್ರಿಯತೆಯನ್ನು ತನಗೆ ತಾನೇ ಉಳಿಸಿಕೊಂಡು ಬಿಡುತ್ತದೆ. ಹಾಗಾಗಿಯೇ ನವ್ಯವನ್ನು ಒಪ್ಪಿಕೊಂಡು, ನವ್ಯದಭಂದೋ ಬಂಧವನ್ನು ನಿರಾಕರಿಸುವುದು, ಲೇವಡಿ ಮಾಡುವುದು ಇವರಲ್ಲಿ ಕಂಡು ಬರುತ್ತದೆ. 'ವಿನೂತನ ಕವಿಯ ಕೈಫಿಯಿತ್ತು' ಕವಿತೆ ಇದಕ್ಕೆ ಉದಾಹರಣೆ ಆಗುತ್ತದೆ

ಶಿವರುದ್ರಪ್ಪ ಮತ್ತು ಕಣವಿ ಇಬ್ಬರ ನಡುವೆ ಮೇಲು ನೋಟಕ್ಕೆ ಸಾಮ್ಯತೆ ಇದೆ ಅಂತ ಅನಿಸುತ್ತದೆ. ಅದಕ್ಕೆ ಕಾರಣ ಇವರಿಬ್ಬರೂ ನವೋದಯದಲ್ಲಿ ಕೃತಿ ರಚಿಸಲು ತೊಡಗಿ ನವ್ಯ ಮತ್ತು ಇತ್ತೀಚಿನ ದಲಿತ ಬಂಡಾಯಗಳ ಸಂದರ್ಭದಲ್ಲೂ ತಮ್ಮ ಅನುಭವವನ್ನು ವಿಸ್ತರಿಸಿಕೊಳ್ಳಲು ಮುಂದಾಗಿರುವುದು. ಇಬ್ಬರಲ್ಲೂ ತೀವ್ರ ಭಾವನಾಮಯತೆ ಇದೆ; ವೈಚಾರಿಕತೆಗೆ ಮುಖಾಮುಖಿಯಾದಾಗಲೂ ಸಹ ಪ್ರಧಾನ ಲಕ್ಷಣ ಗುಣವಾದ ಸಂವೇದನಾ ಶೀಲತೆಯನ್ನು ಬಿಟ್ಟು ಕೊಡುವುದಿಲ್ಲ. ಇವರಿಬ್ಬರೂ ನಿರ್ದಿಷ್ಟವಾದ 'ಚೌಕಟ್ಟಿ'ಗೆ ತಮ್ಮನ್ನು ಬಂಧಿಸಿಕೊಳ್ಳಲು ಇಚ್ಛಿಸುವುದಿಲ್ಲ. ಆದರೆ ಪರ್ಯಾಯವಾಗಿ ಎಲ್ಲ ಪ್ರಕಾರಗಳ 'ರೂಪ' ವನ್ನು ಸಹ ಒಳಗೊಳ್ಳಲು ಪ್ರಯತ್ನಿಸುತ್ತಾರೆ.

ಶಿವರುದ್ರಪ್ಪ ನಿಂತಲ್ಲಿಂದ ಕಣವಿ ಆರಂಭಿಸುತ್ತಾರೆ. ಅಂದರೆ ಶಿವರುದ್ರಪ್ಪ ಆಕೃತಿಯನ್ನು ಹಿಂದಿಟ್ಟು ವಸ್ತುವನ್ನು ಪ್ರಧಾನವಾಗಿಟ್ಟುಕೊಂಡು ಬರೆದಾಗ ಸಹಜವಾಗಿ ಬಂಧ ಮತ್ತು ಸಾವಯುವ ಸಂಬಂಧದ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ, ಹೇಳಬೇಕಾದ್ದನ್ನು ಆದಷ್ಟೂ ಸರಳವಾಗಿ ಮತ್ತು ಸಮುದಾಯಕ್ಕೆ ಹಿತವಾಗುವ ರೀತಿಯಲ್ಲಿ ಹೇಳಬೇಕು ಎಂಬುದೇ ಅವರಿಗೆ ಮುಖ್ಯವಾಗುತ್ತದೆ. ಆಗ ಅಭಿವ್ಯಕ್ತಿಸಬೇಕಾದದ್ದೇ ಅವರ ಗಮನವಾಗುತ್ತದೆ.

ಆದರೆ ಕಣವಿಯವರು ಗೆಲ್ಲುವುದು ಅವರ ಈ ಕಲಾತ್ಮಕ, ಸೌಂದರ್ಯಾತ್ಮಕ ಮತ್ತು 'ರೂಪ'ದ ಸೃಷ್ಟಿಯಲ್ಲಿನ ಗೆಯ್ಮೆಯಿಂದ. ತೀವ್ರ ಸಾಮಾಜಿಕ ಪ್ರಕ್ರಿಯೆ, ಪ್ರತಿಕ್ರಿಯೆಗಳನ್ನು ಸಹ ಕಲಾತ್ಮಕ ನೆಯ್ಗೆಯಲ್ಲಿ ಹೊಲಿದಿಡಲು ಮುಂದಾಗುತ್ತಾರೆ. ಸೌಂದರ್ಯ ಪ್ರಜ್ಞೆ ಮತ್ತು ಸಾಮಾಜಿಕ ಪ್ರಜ್ಞೆಗಳೆರಡನ್ನೂ ಒಂದು ಬಿಂದುವಿನಲ್ಲಿ ತಂದು ಸಲ್ಲಿಸಲು ಯತ್ನಿಸುವುದು ಇವರ ಜಾಯಮಾನ.

ಕನ್ನಡ ವಿಮರ್ಶೆ ಇವರಿಬ್ಬರನ್ನಷ್ಟೇ ಅಲ್ಲ, ಇದೇ ರೀತಿ ಬರೆಯುತ್ತಿರುವ ಎಕ್ಕುಂಡಿ, ಅಕಬರ ಅಲಿ, ವಿ. ಜಿ. ಭಟ್ಟ ಮೊದಲಾದವರ ಕವಿತೆಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಇವರೆಲ್ಲ ತಂತ್ರಕ್ಕೆ, ಅಭಿವ್ಯಕ್ತಿಯ ಕಸರತ್ತಿಗೆ ವಿಶೇಷ ಮಹತ್ವ ಕೊಡಲಿಲ್ಲ ಎನ್ನುವುದೂ ಸಹ ಒಂದು ಕಾರಣವಾಗಿರಬಹುದು. ನವ್ಯ ವಿಮರ್ಶಕರೆಲ್ಲ 'ರೂಪ' ನಿಷ್ಠತೆಯನ್ನೇ ಮುಂದಿಟ್ಟುಕೊಂಡಿದ್ದರಿಂದ ಇಂತಹ ಅನ್ಯಾಯ ಆಗಿರಲು ಸಾಧ್ಯ.

ಎರಡನೆಯ ಕಾರಣವೆಂದರೆ, ಶಿವರುದ್ರಪ್ಪ ಅಥವಾ ಕಣವಿಯವರ ಬಿಡಿ ಬಿಡಿ ಪದ್ಯಗಳನ್ನು ಓದಿದಾಗ ಅನಿಸುವ ಖುಷಿ, ಪರಿಣಾಮ ಅವರ ಒಟ್ಟೂ

ಕಾವ್ಯವನ್ನು ಸಮಗ್ರವಾಗಿ ಓದಿದಾಗ ಉಂಟಾಗುವುದಿಲ್ಲ. ಇವರಿಬ್ಬರೂ ಅಪಾರ 'ಮಹತ್ವಾಕಾಂಕ್ಷೆ' ಇಟ್ಟುಕೊಂಡವರಲ್ಲ. 'ಚಿರಂತನಭಾವ'ಗಳನ್ನು ಭಾಷೆಯಲ್ಲಿ ಸೆರೆ ಹಿಡಿಯಲು ಮುಂದಾದರೇ ವಿನಾ ಶಾಶ್ವತ ಅರ್ಥವನ್ನು,ಸತ್ಯವನ್ನು ಸ್ಥಾಪಿಸಲು ಮನಸ್ಸು ಮಾಡಲಿಲ್ಲ, ಯಾಕೆಂದರೆ 'ವರ್ತಮಾನ'ದ ಪ್ರಜ್ಞೆಯನ್ನು ಅದರೆಲ್ಲ ಸಂಕೀರ್ಣತೆಗಳೊಡನೆ ದಾಖಲಿಸಬೇಕು ಎನ್ನುವುದೇ ಅವರ ನಿಲುವಾಗಿತ್ತು. ಬದಲಿಗೆ ಯಾವುದೇ ಒಂದು ಖಚಿತವಾದ ಪ್ರಕಾರಕ್ಕೆ ಜೋತು ಬೀಳುವುದು ಅವರಿಗೆ ಇಷ್ಟವಾದ ಸಂಗತಿ ಆಗಿರಲಿಲ್ಲ.

ನಮಗೆ ಮತ್ತು ನಮ್ಮ ವಿಮರ್ಶಕರಿಗೆ ಪ್ರತಿಮೆ, ಪ್ರತೀಕಗಳ ಭಾಷೆ ಮಾತ್ರ ರೂಢಿಯಾಗಿರುವುದರಿಂದ, ಸರಳವಾದ, ಕೆಲವು ಸಲ ಶಿಥಿಲ ಅಂತ ಅನಿಸಬಹುದಾದ ರಚನೆಗಳು ಇಷ್ಟವಾಗದೇ ಇರುವ ಸಾಧ್ಯತೆಯೂ ಇದೆ.

ಕನ್ನಡ ವಿಮರ್ಶೆ ನಿಷ್ಪಕ್ಷಪಾತವಾಗಿ ಬೆಳೆದು ಬಂದಿಲ್ಲ. ನವೋದಯದಿಂದ ಹಿಡಿದು ನವ್ಯದ ತನಕ ಗುಂಪುಗಾರಿಕೆಯ ಆಳಾಗಿಯೇ ಈ ವಿಮರ್ಶೆ ಕೆಲಸ ಮಾಡಿದೆ. ಗುಂಪು, ವಶೀಲಿ ಮೊದಲಾದ ಹವ್ಯಾಸಗಳಿಂದ ಈ ಕವಿಗಳಿಬ್ಬರೂ ದೂರವಿದ್ದುದರಿಂದ ವಿಮರ್ಶಕರೂ ಸಹ ಅವರ ಕಾವ್ಯಕ್ಕೆ ಪ್ರಾಮಾಣಿಕವಾದ ನ್ಯಾಯ ಒಪ್ಪಿಸಲಿಲ್ಲ.

ಕೊನೆಯದಾಗಿ ಒಂದು ಮಾತು, ಪ್ರಥಮ ದರ್ಜೆಯ ಪ್ರತಿಭೆ ಹೊಂದಿದ ಈ ಕವಿಗಳು ತಮ್ಮ ನಂತರದ ಪೀಳಿಗೆಯ ಮೇಲೆ ಪ್ರಭಾವ ಬೀರಬಹುದಾದ ರಚನೆಗಳನ್ನು ಮಾಡಲು ಯಾಕೆ ಮುಂದಾಗಲಿಲ್ಲ ? ತಮ್ಮಷ್ಟಕ್ಕೆ ತಾವು ಸೃಷ್ಟಿಕ್ರಿಯೆಯಲ್ಲಿ ತೊಡಗಿದರೇ ವಿನಾ, ತಾವು ನಂಬಿದ ಮಾರ್ಗದ ವಿಸ್ತಾರಕ್ಕೆ, ವಿಕಸನಕ್ಕೆ ತಕ್ಕ ಮಾದರಿಗಳನ್ನು ಕೊಡಲಾರದೇ ಹೋದುದರ ಹಿಂದೆ ಇರಬಹುದಾದ ಕಾರಣಗಳಾದರೂ ಏನು ಇರಬಹುದು ? ಹೀಗೆ ಹೇಳುವುದರ ಉದ್ದೇಶ ಇವರ ಕಾವ್ಯದ ಮೌಲ್ಯವನ್ನು, ಸ್ಥಾನವನ್ನು ನಿರಾಕರಿಸುವುದಕ್ಕೆ, ಕಡೆಗಣಿಸುವುದಕ್ಕೆ ಅಲ್ಲ. ಹಾಗಾದರೆ ನಾನೇ ಎತ್ತಿದ ವಿಮರ್ಶೆಯ ದೌರ್ಬಲ್ಯಕ್ಕೆ ನಾನೇ ತುತ್ತಾಗುವ ಅಪಾಯ ಬಂದು ಬಿಡುತ್ತದೆ. ಹೀಗೆ ಪ್ರಶ್ನಿಸಿಕೊಂಡು ಗಂಭೀರವಾಗಿ ಅರಿಯುವ ಕ್ರಿಯೆಯಲ್ಲಿ ತೊಡಗಿಕೊಂಡರೆ ನಮ್ಮ ಒಟ್ಟೂ ಕಾವ್ಯ ಸೃಷ್ಟಿಯ ಪ್ರಕ್ರಿಯೆಯ ಸಮಗ್ರ ಇತಿಮಿತಿಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು ಎಂಬ ತಿಳುವಳಿಕೆ ನನ್ನದು,

## ಅಡಿ ಟಿಪ್ಪಣಿ

೧. ಕೆ. ವಿ. ನಾರಾಯಣ : ಸಮಗ್ರ ಕಾವ್ಯ ಪು. ೬

೨. ಕೆ. ವಿ. ನಾರಾಯಣ : ಸಮಗ್ರ ಕಾವ್ಯ

೩. ಗಿರಡ್ಡಿಗೋವಿಂದರಾಜ : ಚೆಂಬೆಳಕು, ಪು. ೧೨೫-೮೬

೪. ಜಿ. ಎಸ್, ಶಿವರುದ್ರಪ್ಪ : ಚತುರಂಗ, ಪು. ೫೦

೫. ರೊಮ್ಯಾಂಟಿಸಸಂನ ವಿಸ್ತ್ರತ ರೂಪವೇ ನಿಯೋರೋಮ್ಯಾಂಟಿಸಿಸಂ. ಇದು ಒಂದು ಚಳುವಳಿಯಾಗಿ ಬೆಳೆಯುಲಿಲ್ಲ. ಅದು ದುರ್ಬಲವಾಗಿತ್ತು ಎಂಬ ಅಭಿಪ್ರಾಯವೂ ಇದೆ. ಈ ನೆಲೆಯಲ್ಲಿ ನಮ್ಮ ಸಮನ್ವಯವನ್ನು ಚರ್ಚಿಸುವುದು ಸಾಧ್ಯವಾಗಬಹುದೇ ಎಂಬುದು ನನ್ನ ಪ್ರಶ್ನೆ.

೬. ಕೆ. ವಿ. ನಾರಾಯಣ : ಸಮಂಗ್ರಕಾವ್ಯ, ಪು. ೩.

೭. ಜಿ. ಎಸ್. ಶಿವರುದ್ರಪ್ಪ : ಚತುರಂಗ, ಪು. ೪೬.

೮. ಕೆ. ವಿ. ನಾರಾಯಣ : ಸಮಗ್ರಕಾವ್ಯ, ಪು. ೬.

೯. ಕೆ. ವಿ, ನಾರಾಯಣ : ಸಮಗ್ರ ಕಾವ್ಯ, ಪು. ೫

೧೦. ಕೆ. ವಿ. ತಿರುಮಲೇಶ ; ಸಮ್ಮುಖ, ಪು. ೬೫



# ಜೀವನ ದರ್ಶನ

---

**ನಾಮಸ ಬೇಂದ್ರೆ**

ದ. ರಾ. ಬೇಂದ್ರೆಯವರು ಕಣವಿಯವರ ಚೊಚ್ಚಲ ಕಾವ್ಯ 'ಕಾವ್ಯಾಕ್ಷಿ' ಯೊಳಗಿನ ವೈವಿಧ್ಯವನ್ನು ಗುರುತಿಸಿ, ಜೀವಂತಿಕೆಯನ್ನು ಕಂಡು "ಚೆನ್ ಬೆಳಕಿನಲ್ಲಿ ಕವಿಯ ನಿರ್ಮಲ ಹೃದಯಾಕೂತಿ ಮೂಡಿದೆ ... ಕವಿಗಳ ಶಾರದೀಯ ಪ್ರವಾಹವು ಹರಿದು ಬಂದು ಕನ್ನಡ ಕವನವನ್ನು ಉಕ್ಕಿಸಲಿ" ಎಂದು ಹರಸಿದರು. ಶಿವರುದ್ರಪ್ಪನವರ ಚೊಚ್ಚಲು ಕೃತಿ 'ಸಾಮಗಾನ' ವನ್ನು ಕುರಿತು ರಾಷ್ಟ್ರಕವಿ ಗಳಾದ ಕುವೆಂಪು ಅವರು "ಕರೆ, ಒಳದನಿ, ತೃಪ್ತಿ– ಈ ಕವನಗಳಲ್ಲಿ ವ್ಯಕ್ತವಾಗಿರುವ ಹೃದಯಭಕ್ತಿ,ಎಚ್ಚರಿಕೆ, ಹಾರೈಕೆ, ಶಿವರುದ್ರಪ್ಪನವರ ಚೇತನವನ್ನು ಋಜುಪಥದಲ್ಲಿ ನಡೆಸಿ, ಅವರನ್ನು ರಸಸೇತುವೆಯಿಂದಲೇ ಸತ್ಯ ಮತ್ತು ಸೌಂದರ್ಯದ ಶಿವಸೀಮೆಗೆ ಕರೆದೊಯ್ಯಲಿ ಎಂದು ಹರಸುತ್ತೇನೆ" ಎಂದರು. ಮಹಾಕವಿಗಳ ಹಾರೈಕೆಯ ಫಲವಾದ ಕಣವಿ ಮತ್ತು ಶಿವರುದ್ರಪ್ಪನವರು, ಜನಪ್ರಿಯತೆ ಹಾಗೂ ಜನ ಮನ್ನಣೆಯನ್ನು ಅಪಾರವಾಗಿ ಪಡೆದಿದ್ದಾರೆ.

ಇಬ್ಬರಿಗೂ ಚಿಕ್ಕಂದಿನಿಂದ ವಾಚನಾಭಿರುಚಿ. 'ಕಾರಂತರ ಬಾಲಪ್ರಪಂಚ, ಗೋವಿನ ಕಥೆ, ಕುವೆಂಪು ಅವರ 'ರಕ್ತಾಕ್ಷಿ', ಡಿ. ವಿ. ಜಿ. ಯವರ ಮಂಕುತಿಮ್ಮನ ಕಗ್ಗ, ಇವುಗಳ ಜೊತೆಗೆ ವರ್ಡ್ಸ್‌ವರ್ತ್, ಎಲಿಯಟ್, ಲಾರೆನ್ಸ್ ಅವರ ಕಾದಂಬರಿ ಗಳು ಶಿವರುದ್ರಪ್ಪನವರ ಮೇಲೆ ಪ್ರಭಾವ ಬೀರಿವೆ. "ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಕುವೆಂಪು ಎನ್ನುವುದರಲ್ಲಿ ಅನುಮಾನವೇ ಇಲ್ಲ" ಎಂದಿದ್ದಾರೆ–

ಶಿವರುದ್ರಪ್ಪ. ಕಣವಿ ಅವರ ಮೇಲೆ ಮೊದಲು ಪ್ರಭಾವ ಬೀರಿದವರು– ಮಧುರಚೆನ್ನರು, ಅನಂತರ ಬೇಂದ್ರೆ. "ಒಟ್ಟಾಗಿ ನನ್ನ ಆಲೋಚನೆ, ತಾತ್ವಿಕ ಚಿಂತನೆ, ಕಾವ್ಯಸೃಷ್ಟಿ, ಜೀವನದ ರೀತಿ ಇವುಗಳ ಮೇಲೆ ಮೊದಲಿನಿಂದ ಕೊನೆಯ ವರೆಗೂ ಪ್ರಭಾವ ಬೀರಿದ ಅತ್ಯಂತ ಪ್ರಮುಖವಾದ ಗ್ರಂಥ "ಬಸವಣ್ಣನವರ ಷಟ್‌ಸ್ಥಲದ ವಚನಗಳು" ಎಂದಿದ್ದಾರೆ– ಕಣವಿ.

ಇಬ್ಬರ ಸಾಹಿತ್ಯ ಯಾತ್ರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಇಬ್ಬರಲ್ಲಿಯೂ ಆರೋಗ್ಯಕರವಾದ ಕಾವ್ಯ ಕ್ರೀಡಾ ಸ್ಪರ್ಧೆ ನಡೆದಿರುವ ಭಾಸವಾಗುತ್ತದೆ. ಇಬ್ಬರ ಕಾವ್ಯವೂ ಪರಸ್ಪರ ಪ್ರೀತಿಯಿಂದ ಬೆಳೆದು, ಅನುಕರಣೀಯವಾದ ಮಾರ್ಗವನ್ನು ಕನ್ನಡ ಸಾಹಿತ್ಯದಲ್ಲಿ ಸೃಷ್ಟಿಸಿದೆ ಎಂದು ತೋರದೆ ಇರದು.

ಕಣವಿಯವರ ಒಳದನಿ :

ನನ್ನೆದೆಯ ಗೂಡಿನೊಳಗಾವುದೋ ಹಕ್ಕಿಯುಲಿ
ಚಿಲಿಪಿಲಿಸುತಿಹುದಾವ ನಿಮಿಷದಲ್ಲು;
ಜಗದಮೊರೆ– ಕರೆಗಳಿಗೆ, ಚೆಲುವು ಚಿನ್ನಾಟಕ್ಕೆ
ದನಿಗೂಡಿ ಹಾಡುತಿದೆ ಕನಸಿನಲ್ಲು.

['ಒಳದನಿ' –ಕಾವ್ಯಾಕ್ಷಿ]

ಎಂದು ಸಾರಿದರೆ, ಶಿವರುದ್ರಪ್ಪನವರ ಒಳದನಿ :

ಹಾರದಿರು, ಹಾರದಿರು, ಈಗಲೇ ಹಾರದಿರು
ಅನಂತ ವಿಸ್ತರದ ನೀಲ ನಭಕೆ,
ರೆಕ್ಕೆ ಬಲಿಯದ ಮುನ್ನ, ಪುಕ್ಕವೇಳದ ಮುನ್ನ
ಮೈಯಲ್ಲಿ ಸಾಕಷ್ಟು ಬಲಬರದ ಮುನ್ನ,
ಹಾರಲೆಳಸುವೆಯೇಕೆ
ಈ ನೀಲ ನಭಕೆ ?

['ಒಳದನಿ'– ಸಾಮಗಾನ]

ಎಂದು ಪ್ರಶ್ನಿಸಿದೆ.

ಕಣವಿಯವರ 'ಭಾವಜೀವಿ'ಯಂಥ ಕಾವ್ಯ, ಶಿವರುದ್ರಪ್ಪನವರಿಂದ ಹೊರ ಬಂದಿಲ್ಲ. ಮಧುರಚೆನ್ನರ 'ನನ್ನ ನಲ್ಲ'ದ ಪ್ರಭಾವಿಯಾದ ಪ್ರೇರಣೆಯಿಂದ, ಭಾವ ಜೀವಿ ಅರಳಿದರೆ ರಾಮಕೃಷ್ಣಪರಮಹಂಸ ಮತ್ತು ವಿವೇಕಾನಂದರ ಬೆಳಕಿನಲ್ಲಿ

ಸಾಗಿದ ಶಿವರುದ್ರಪ್ಪನವರಿಂದ 'ವಚನವೇದ'ದೊಳಗಿನ ಐವತ್ತು ಕವನಗಳ ಸುಂದರವಾದ, ಗೇಯವಾದ ಅನುವಾದವು 'ತೀರ್ಥವಾಣಿ'ಯಾಗಿ ಪ್ರಕಟವಾಗಿದೆ.

ಇಬ್ಬರೂ ಪ್ರಕೃತಿ ಪ್ರಿಯ ಕವಿಗಳು. ಪ್ರಾರಂಭದ ಕವನಗಳಲ್ಲಿಯಂತೂ, ನಿಸರ್ಗದ ನಿತ್ಯ ಘಟನೆಗಳಾದ– ಹಗಲು, ಸಂಜೆ, ರಾತ್ರಿ, ಹೂ, ಹೊಳೆ, ಕಡಲು, ಚಳಿ, ಬಿಸಿಲು, ಮಳೆಗಳನ್ನು ಕುರಿತು ಇಬ್ಬರೂ ಮಾರ್ಮಿಕವಾಗಿ ಹಾಡಿದ್ದಾರೆ.

ಸಂಜೆವೆಣ್ಣಿನ ಸಕಲ ಸೌಭಾಗ್ಯ ಹೊಮ್ಮುತಿದೆ !
– – – – – –
ಕರಿನೆರಳ ಚಾಚಿಹುದು, ನೀಲ ಸೀಮಂತದಲಿ
ಒಂದೊ, ಎರಡೋ ಚಿಕ್ಕೆಯರಳು ಚೆಲ್ವೆಳಕಿನಲಿ
ಚಿಮುಕುತಿವೆ, ಇಲ್ಲಿ ಮೌನಧ್ಯಾನವೇ ಪೂಜೆ
ಚಿತ್ರಗಾರನ ಕುಶಲ ಕುಂಚ ಬಣ್ಣಿಸದಿದನು.
– – – – – –
ಪ್ರಕೃತಿ ಸೌಂದರ್ಯದೌದಾರ್ಯಕೆನ್ನಲ್ಪತನು
ಮುಡಿಪಾಗಿ ಕರಗಿಹುದು, ಅರ್ಪಣಾನಂದದಲಿ,
ಸಾವು ಬಂದರು ಇಂಥ ಶಾಂತ ಸಮಯದಿ ಬರಲಿ.

['ಒಂದು ಸಂಜೆ' - ಆಕಾಶಬುಟ್ಟಿ]

ಎಂದು ಕಣವಿಯವರು ಬಯಸಿದರೆ; ಶಿವರುದ್ರಪ್ಪನವರು 'ಸಂಜೆ' ಕವನದಲ್ಲಿ.

ಹಗಲಿಂ ಬೆಳಕಿನ ಗಡಿಗೆ–
ಯೊಡೆದು ಚೂರಾಯಿತದೋ
ಪಶ್ಚಿಮಾದ್ರಿಯ ಶಿಖರದರೆಯೊಂದರಲ್ಲಿ !
ಗಡಿಗೆಯಲ್ಲಿದ್ದರಸ, ದಿಕ್ಕುದಿಕ್ಕಿಗೆ ಹರಿದು
ಮೋಡಗಳಿಗೂ ಸಿಡಿದು
ಅಲ್ಲೆಲ್ಲ ಇಂಗುತಿದೆ ಮೌನದಲ್ಲಿ;
ಬಾನ್ನೀರೆ ಬೆಪ್ಪಾಗಿ, ನಿಂತಿರುವಳಲ್ಲಿ !

['ಸಂಜೆ'– ಚೆಲುವು ಒಲವು]

ಅದ್ಭುತವಾದ ರೂಪಕವನ್ನು ಸೃಷ್ಟಿಸಿದ್ದಾರೆ. ಮತ್ತು

ಚಿಂತೆಗಳೆ ಕಣ್ತೆರೆದು ನೋಡುವಂತೆ
ಅಲ್ಲಲ್ಲಿ. ಹಗಲಗೋರಿಯ ಮೇಲೆ ಹಚ್ಚಿಟ್ಟ ದೀಪದಂತೆ

ಎಂಬ ಉಪಮೆಗಳಿಂದ ಕವನವನ್ನು ಮುಕ್ತಾಯಗೊಳಿಸಿದ್ದಾರೆ.

ಇಬ್ಬರ ಕವನಗಳಲ್ಲಿಯೂ ವಾತ್ಸಲ್ಯಗೀತಗಳಿವೆ. ಶಿವರುದ್ರಪ್ಪನವರ 'ಕ್ರಾಂತಿಕಾರ' ಮಗನ ರೀತಿ ಹೀಗಿದೆ.

ಸಿಟ್ಟು ಬಂದರೆ ಇವನ ತಡೆಯುವವರಾರುಂಟು ?
ರುದ್ರಾವತಾರ !
ನಕ್ಕು ನಗಿಸುವ ಚಿಣ್ಣ, ಎದೆಯ ಒಲವಿನ ಹಿರಿಯ ಸೂರೆಕಾರ.
ನನಗು ಅವಳಿಗು ನಡುವೆ ವ್ಯಕ್ತ ಪ್ರೇಮದ ಸೇತು;
ಇವ ಮಾಯಕಾರ
ಎರಡು ಬಾಳನು ಬೆಸೆದ ಸೂತ್ರಧಾರ

['ಕ್ರಾಂತಿಕಾರ'– ಚೆಲುವು–ಒಲವು]

ಕಣವಿಯವರ ಮಗಳು 'ರಂಜನಾ' ಇವಳ ಹಟಮಾರಿತನ; ಮೂರು ಮಕ್ಕಳಲ್ಲಿಯ ಮೂರು ಒಪ್ಪಂದ ಹಾಗೂ ನೂರು ಯುದ್ಧ; ಹಸುಳೆಯ ನಗೆ;

ರಂಜನಾ
ರಂಜನಾ
ಕುಹೂ ಕುಹೂ ಕೂಜನ
ವಾತ್ಸಲ್ಯದ ಕೇತನ.
ಇಲ್ಲಿ ಬಾ, ಹೆಜ್ಜೆಗಳ ಕುಣಿಸಿ ತೋರಿಸು, ಜಾಣೆ
ನೋಡೋಣ, ಕಾರಂಜಿ ಬೃಂದಾವನ !
ಈ ಸೃಷ್ಟಿ ನೂತನ
ನೀನೆಮ್ಮ ಚೇತನ
ತೃಣಮಪಿನಚಲತಿ ನಿನ್ನವಿನಾ, ನಿನ್ನವಿನಾ, ನಿನ್ನವಿನಾ.

['ರಂಜನಾ'– ನೆಲಮುಗಿಲು]

ಕವಿಜೀವದೊಂದಿಗೆ ಮಾತನಾಡಿದೆ.

ದಾಂಪತ್ಯ ಜೀವನದಲ್ಲಿ ಸರಸ ಮತ್ತು ವಿರಸ, ಮಿಲನ ಮತ್ತು ಅಗಲಿಕೆ ಸರ್ವ ಸಾಮಾನ್ಯ. ಕಣವಿಯವರು ತಮ್ಮ ವಿರಹ ಜೀವನದ ಐದು ಚಿತ್ರಗಳನು ಕೊಡುತ್ತಾರೆ. ಅವುಗಳಲ್ಲಿ–

ಅಡಿಗೆ ಮನೆಯೊಳು ಬರಿಯ ಹೊಗೆಯಾಡಿದಂತಿಹುದು
ದಿನದ ಗುಂಜಾರವದ ನಿನದವಿಲ್ಲ;
ನಡು ಮನೆಗು ಪಸರಿಸುವ ನಗೆಯ ಸುಳಿವೇ ಇಲ್ಲ
ಸೆಜ್ಜೆವನೆ, ಪಡಿಪಾಟು ಶಿವನೆ ಬಲ್ಲ.
ಇಂದು ಬಂದಿಹ ಓಲೆಯಲ್ಲಿ ಮರುಕದ ಸಾಲು;
ರವಿವಾರ ದಿನ ನೀವು ಬರಲೇಬೇಕು;
ಅದು ಎಲ್ಲ ಸರಿ, ಆದರಿಂದು ಮಂಗಳವಾರ
ನಾಲ್ಕು ದಿನಗಳನೆಂತು ನೂಕಬೇಕು ?

['ವಿರಹಕೂಜನ' – ಮಧುಚಂದ್ರ]

ಈ ಎರಡು ಚಿತ್ರಗಳಲ್ಲಿ ನಮಗೆ ಕನ್ನಡದ ಸರಸಕವಿ ಕೆ. ಎಸ್. ನರಸಿಂಹ ಸ್ವಾಮಿಯವರ ನೆನಪಾಗದೆ ಇರದು.

ಗಂಡ ಹೆಂಡಿರ ಜಗಳ ಒಮ್ಮೊಮ್ಮೆ ಯಾವ ವಿಕೋಪಕ್ಕೆ ಹೋಗುತ್ತದೆ ಎಂಬುದರ ಚಿತ್ರವನ್ನು ಶಿವರುದ್ರಪ್ಪನವರು ವರ್ಣಿಸಿದ್ದು ಹೀಗಿದೆ.

ಹರಿಯಿತೇನು ಋಣ ನನಗೂ, ನಿನಗೂ
ಬೆಸುಗೆ ಬಿರಿಯಿತೆ ಒಲವಿಗೆ ಕಡೆಗೂ!
– – – – –
– – – – –
ಮೋಡ ತಬ್ಬುತಿವೆ ಬೆಟ್ಟದ ಎದೆಯ
ಬಳ್ಳಿ ಮುದ್ದಿಸಿದೆ ಮೊಗ್ಗೆಯ ತುಟಿಯ
ಚಿಕ್ಕೆ ಹಾಡುತಿವೆ ಬೆಳಕಿಗೆ ಜಯವ
ಸೃಷ್ಟಿಯ ತುಂಬಾ ಒಲವಿನ ವಿಭವ.
ಪ್ರಥಮ ಕಿರಣ ರಥವೇರಿ ಬಂದೆವು
ಜನುಮ ಜನುಮದಲಿ ಜೊತೆಗೆ ನಿಂದೆವು
ಗುರುತು ತಪ್ಪಿದರೂ, ಗುರುತು ಹಿಡಿದೆವು
ಒಬ್ಬರಿಗೊಬ್ಬರು ಆಸರೆಯಾದೆವು!
ಹೀಗಿದ್ದೂ–
ಹರಿಯಿತೇನು ಋಣ ನನಗೂ ನಿನಗೂ
ಬೆಸುಗೆ ಬಿರಿಯಿತೇ ಒಲವಿಗೆ ಕಡೆಗೂ!

['ವಿರಹಗೀತೆ'–ದೇವಶಿಲ್ಪ]

ಕಣವಿಯವರ 'ದೀಪಧಾರಿ' ಮತ್ತು ಶಿವರುದ್ರಪ್ಪನವರ 'ದೀಪದ ಹೆಜ್ಜೆ' ಅತ್ಯಂತ ವಿಶಿಷ್ಟವಾದ ಕವನ ಸಂಗ್ರಹಗಳಾಗಿವೆ. ಶಿರೋನಾಮೆಗಳಲ್ಲಿಯ ಸಾಮ್ಯವು ಬಾಹ್ಯ ಆಶ್ಚರ್ಯವಾದರೆ, ಇಬ್ಬರೂ ಮಾನವ ಮತ್ತು ಅವನ ಅಂತರಂಗ, ಮಾನವ ಮತ್ತು ಕಾಲ ಇವುಗಳ ಚಿಂತನೆಯನ್ನು ನಡೆಸಿದುದು ಕಾವ್ಯಾಂತರಂಗದ ಸೊಗಸಾಗಿದೆ. ಜೀವನದಲ್ಲಿ ನೆರಳಿದೆಯೆ ?

ನಿಟ್ಟುಸಿರನೆಳೆದು
ದಾಟಿತು ಕೊನೆಯ ರೈಲು
ತಕ್ಕೊ ಕೈಮರದ ಕರಡೀ ಸಲಾಮು.
— — — — —
ನೆರಳು — — — —
ನೆರಳಿನದೊಂದು ಪರಿವಾರವೇ ನಿಂದು
ಕೈ ಚಾಚುತಿದೆ ನರಗೆ ನಾರಾಯಣ ॥
— — — — —
ಹೊಗೆಯುಗುಳಿ
ದಾಟಿತು ಕೊನೆಯ ರೈಲು
ಕೈಯ ಚಾಚಿದ ನೆರಳು ತೆವಳುತ್ತಿದೆ
ನೆರಳು ನರಳುತ್ತಿದೆ.

['ನೆರಳು'–ದೀಪಧಾರಿ]

ಈ ಕವನದಲ್ಲಿ ಕಣವಿಯವರು, ತೊಗಲುಬಾವಲಿ, ಕೊಳ್ಳಿದೆವ್ವ, ಗೂಬೆ ಮೊದಲಾದ ಪ್ರತೀಕಗಳಿಂದ ಕಾಲದ ಕರಾಳತೆಯನ್ನು ವರ್ಣಿಸಿದ್ದಾರೆ. ಶಿವರುದ್ರಪ್ಪನವರಂತೂ, ಈ ಜೀವನದಲ್ಲಿ ನೆರಳಿನ ದಾರಿಯೇ ಇಲ್ಲ ಎಂದು ಚಿಂತಾತುರರಾಗಿದ್ದಾರೆ.

ಇದು ನೆರಳಿಲ್ಲದ ದಾರಿ
ಮರವೇ, ಗಿಡವೇ, ಕಾಣಬಹುದೆ ಒಂದಾದರು
ನೆರಳಿನ ತೇಪೆ ?
ನೆಲವೋ ಬಣ್ಣ ಬಣ್ಣಗಳ ಮಣ್ಣಿನ ಚಾಪೆ.
ಎಲ್ಲೋ ಹೇಗೋ ಒಂದಾದರು ಮರ ಕಣ್ಣಿಗೆ ಬಿತ್ತೋ
ಅದು ಕೂಡಾ ವಿಕೃತಿಯ ನಿಷ್ಕರುಣೆಯ ರೂಪೇ !
— — — — —

ಬಿರುಬಿಸಿಲಿನ ಗೋರಿ
ಕನವರಿಸಿದೆ ನಿಟ್ಟುಸಿನ ದಾರಿಃ
ಬಂದೀತೆಂದಿಗೆ ಈ ಕಡೆಗೆ
ಗಂಗೆಯ ಮೆರವಣಿಗೆ

['ನೆರಳಿಲ್ಲದ ದಾರಿ' ದೀಪದ ಹೆಜ್ಜೆ]

ಇವು ನವ್ಯಮಾರ್ಗದ ಕವನಗಳಾಗಿದ್ದರೂ, ಕಣವಿಯವರ 'ಕೈ ಚಾಚುತಿದೆ ನರಗೆ 'ನಾರಾಯಣ'! ಮತ್ತು ಶಿವರುದ್ರಪ್ಪನವರ– "ಬಂದೀತೆಂದಿಗೆ ಈ ಕಡೆಗೆ, 'ಗಂಗೆಯ ಮೆರವಣಿಗೆ' ಎಂಬ ಅಭಿವ್ಯಕ್ತಿಗಳಲ್ಲಿ, ನವೋದಯ ಕಾವ್ಯದ ಮನೋಧಮವು ಪ್ರಕಟವಾಗಿದೆ. ಈ ಎರಡೂ ಮಾರ್ಗಗಳಲ್ಲಿ ಈ ಕವಿಗಳಿಗೆ ಸಹಜ ಪ್ರವೇಶ ಮತ್ತು ಗೆಲವು ಇರುವುದನ್ನು ಇವರಿಬ್ಬರ ಇಂದಿನ ಕಾವ್ಯದಲ್ಲಿಯೂ ನಾವು ಕಾಣಬಹುದು.

ನಗರ ಜೀವನವು ಹೇಗೆ ವಿಕಾರ ಗೊಳ್ಳುತ್ತಿದೆ ಮತ್ತು ಹೊಸ ಹೊಸ ತಿರುವುಗಳನ್ನು ಪಡೆಯುತ್ತಿದೆ ಎಂಬುದನ್ನು ಕಣವಿಯವರು ವರ್ಣಿಸುವುದು ಹೀಗೆ :

'ಬಿಕೊ' ಎನ್ನುತಿದೆ, ಹಾಳು ನೀಲಿಯ ಆಕಾಶ,
ಅಲ್ಲಿ ಒಂದೇ ಸಮನೆ ಚಕ್ರ ಹಾಕುವ ಹದ್ದು ಅದಕೆ ಮುದ್ದು.
ವಕ್ರ ಹಳಿಗಳಗುಂಟ ಹೊಟ್ಟೆ ಹೊಸೆಯುತ ಹೊರಟು
ನಿಂತಿಹುದು ರೈಲು.
– – – – – – –
– – – – – – –
ಬಾ, ವಿಕಾರಿ
[ಆ ಹೆಸರು ನಿನಗಲ್ಲ, ನಮಗೇ ಸರಿ]
ಒಳಗು ಹೊರಗೂ, ನಿನ್ನ ಹರಿದು ತಿನ್ನುವರಿಹರು ಬಲು ಹುಷಾರಿ.

['ವಿಕಾರಿ'– ಮಣ್ಣಿನ ಮೆರವಣಿಗೆ]

ಇಲ್ಲಿಯು ಪ್ರತಿಮೆ ಮಾರ್ಮಿಕವಾಗಿದೆ. ವಿಳಂಬಿ ಸಂವತ್ಸರದಿಂದ 'ವಿಕಾರಿ' ಸಂವತ್ಸರಕ್ಕೆ ಪ್ರವೇಶಿಸುವಾಗ, ಹೊರಳುವಾಗ, ಕವಿಯ ಮನಸ್ಸು ಸಾಮಾಜಿಕವಾಗಿ ವಾರ್ಮಿಕ ಚಿಂತನವನ್ನು ಮಾಡಿದೆ.

ಶಿವರುದ್ರಪ್ಪನವರು, ಈ ಚಿಂತನವನ್ನು ಒಂದು ಕಾಲ್ಪನಿಕ, ಸಂಭವನೀಯ ಹಾಸ್ಯಕಥೆಯಿಂದ ವರ್ಣಿಸಿದ್ದಾರೆ. ಈ ಕವನವಲ್ಲಿ ಗಡಿಯಾರ, ಗಾಡಿ ಮತ್ತು ಕಾರ್ಖಾನೆಗಳ ಪ್ರತಿಮೆಗಳು ಅದ್ಭುತವಾದ ಕಾರ್ಯ ಸಾಧಿಸುತ್ತವೆ.

ನಿನ್ನೆ ಇದ್ದರು, ಇಂದು ಇಲ್ಲ
ಅವರೆ ವೆಂಕಟರಾಯರು
— — — — — —
ಕೈಯೊಳಗಿದ್ದ ಗಡಿಯಾರಮಾತ್ರ ಮಿಡಿಯುತ್ತಿತ್ತಂತೆ
ಎದೆ ಮಾತ್ರ ಸ್ತಬ್ಧವಂತೆ !
— — — — — —
ಗಾಡಿಯಲ್ಲಿ ಮನೆಗೆ ತಂದರು ಅವರ :
ಮನೆಯೊಳಗೆ ಮನೆಯೊಡೆಯನಿರಲಿಲ್ಲ– ಅಷ್ಟೇ.
ನೋಡಿದರೆ, ದೊಡ್ಡ ಕಾರ್ಖಾನೆಯಲಿ
ತಂತಿ ಕತ್ತರಿಸಿ, ವಿದ್ಯುತ್ ಹೋದ ಬಗೆ,
ಇದ್ದ ಬೆಳಕಾರಿ– ತಿರುಗಣೆ ಎಲ್ಲ ಸ್ತಬ್ಧ ಮೌನ

['ವ್ಯತ್ಯಾಸ'– ಕಾರ್ತಿಕದ ಮೋಡ]

ಎಲ್ಲ ದೀಪಾವಳಿಗಿಂತ, ೧೯೬೨ ರ ದೀಪಾವಳಿ ತೀರ ಬೇರೆ. ಚೀನ ಮತ್ತು ಭಾರತ ಇವುಗಳಲ್ಲಿ ಯುದ್ಧ ನಡೆದ ಸಂದರ್ಭ ದೀಪಾವಳಿಯಂಥ ಮಹತ್ತ್ವದ ಹಬ್ಬವನ್ನು ಕುರಿತು ಕಣವಿಯವರು ವರ್ಣಿಸುವುದು ಹೀಗೆ;

ಹತ್ತಿರಿದ್ದರು ದೂರ, ಹೃದಯ ಗಹ್ವರದಲ್ಲಿ
ಮಿಣಿಮಿಣಿ ಎನುವ ಪಣತಿ, ನಮ್ಮ ಜೀವದ ಗೆಳತಿ;
ಎರೆ ಹೊಲದ ಎದೆ ಆರಳೆ ಬೆಳ್ಳಿಯಾಯಿತು ಮಣ್ಣೆ
ಹಗಲಿರುಳ ಗಾಣದಲಿ ಹಿಂಡಿ ಬಂದಿರುವೆಣ್ಣೆ
ಲಕ್ಷದೀಪವ ಕುಡಿಗೆ ಬೆಳಕು–ಮುಡಿ ಬಿಸವಂದ.
ಹಿಂದೆ ಚಾಚಿವ ನೆರಳು (ಬೆಳಕು ಬಾಚಿದ ಹೆರಳು)
ಕೈಗೆ ದೀಪವು ಸಿಗಲು ಕತ್ತಲೆಯ ಹುಡುಕುವರು.
ಕಲ್ಲಾಗಿ ನಿಂತಿರುವ ಹೆಣ್ಣು, ದೀಪದ ಮಲ್ಲಿ
ಬಿಲ್ಲು ಬಾಣವ ತೊಟ್ಟು ಹೊರಟವನ ಗುರಿಯೆಲ್ಲಿ ?

['ದೀಪಾವಳಿ' – ನೆಲ ಮುಗಿಲು]

ಎಂಬ ಪ್ರಶ್ನೆಗೆ ಉತ್ತರ. ಶಿವರುದ್ರಪ್ಪನವರ ಪದ್ಯದಲ್ಲಿ ;

ಉತ್ತರದ ಗಡಿಯಲ್ಲಿ ಎತ್ತಿರುವ ಮುಡಿಯಲ್ಲಿ
ಎಚ್ಚರದ ಕಣ್ಣಿನಲಿ ದೀಪಾವಳಿ;
ಕೋವಿಯಲಗಿನ ಮೇಲೆ ಸಂಜೆ ಮುಂಜಾವುಗಳ
ಬೆಳಕು ಬಿಂಬಿಸುವಲ್ಲಿ ದೀಪಾವಳಿ.
ಹೆಜ್ಜೆ ಹೆಜ್ಜೆಗು ಜನದ ಜೀವರಕ್ತವ ತುಂಬಿ
ತೆರೆದ ಬಾವುಟದಲ್ಲಿ ದೀಪಾವಳಿ,
ನಮ್ಮ ಜನಗಣಮನದ ಅಧಿನಾಯಕ ಪ್ರಜ್ಞೆ
ಕಣ್ತೆರೆದು ನಿಂತಲ್ಲಿ ದೀಪಾವಳಿ.
ಎಂದಿನಂತಲ್ಲ ಇದು ನಮಗೆ ಈ ಬಂದ
ಹೊಸ ಬೆಳಕಿನೆಚ್ಚರದ ದೀಪಾವಳಿ.

['ದೀಪಾವಳಿ ೧೯೬೩' – ತೆರೆದ ದಾರಿ]

ಎಂದು ಸ್ಫೋಟವಾಗಿದೆ.

ಕೊಡೆ, ಒಂದು ಅತ್ಯಂತ ಸಾಮಾನ್ಯ ವಸ್ತು. ಆದರೆ ಈ ಛತ್ರಿ ಕವಿಗಳ ಪ್ರಜ್ಞೆಗೆ ಉದ್ದೀಪನ ಕೊಟ್ಟ ರೀತಿ ಮೋಜಿನದಾಗಿದೆ. ಇಬ್ಬರ ಕವನಗಳಲ್ಲಿಯು ಭಾವ ಒಂದೇ, ಅಭಿವ್ಯಕ್ತಿಯ ಸೌಂದರ್ಯ ತೀರ ಬೇರೆ. ಕಣವಿಯವರು ಕೊಡೆಯನ್ನು

ಕೊಡೆ ಹಿಡಿಯುತ್ತೇವೆ
ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು
ಸಿಡಿಸುವ ಕೊಳೆಗೆ, ಆಗದವರು
ಎದುರಿಗೆ ಬಂದಾಗ ಮರೆಗೆ
ಹೊತ್ತು ಬಂದಂತೆ,
– – – – –
ಮೆಚ್ಚುತ್ತೇವೆ ಹೆಣ್ಣು ಏರಿಸಿದ
ಹೂವಿನ ಕೊಡೆಗೆ, ತಂತಿ ಮೇಲಿನ ನಡಿಗೆ.
– – – – –
– – – – –
ಹೊತ್ತು ಹೋದಂತೆ ಮಡಿಚಿ

ಹಿಡಿಯುತ್ತೇವೆ ನಮ್ಮ ಅಭಿರುಚಿ-
ಗೆ ತಕ್ಕಂತೆ,

['ಕೊಡೆ' -ನಗರದಲ್ಲಿ ನೆರಳು]

ಎಂದು ವರ್ಣಿಸಿದ್ದಾರೆ. ಇಲ್ಲಿ ಕೊಡೆ, ಕವಿಯ ಅಭಿರುಚಿಯ ಸಂಕೇತ ಆಗುವುದರೊಂದಿಗೆ, ಕೊಡೆಯ ವಿವಿಧತೆಯನ್ನು- ಏಕಛತ್ರಾಧಿಪತಿಯ ಕೊಡೆ, ಛತ್ರ ಚಾಮರದ ಕೊಡೆ ಎಂದು ಮೊದಲಾಗಿ ವರ್ಣಿಸಲಾಗಿದೆ. ಶಿವರುದ್ರಪ್ಪನವರದು ಸಾರ್ವತ್ರಿಕ ಕೊಡೆ ಅಲ್ಲ; ಅದು ಅವರದೇ ಆದ ಜೀವನ ದೃಷ್ಟಿಯ ಸಂಕೇತವಾಗಿರುವ- ನನ್ನ ಛತ್ರಿ- ಎಂಬ ಕೊಡೆ. ಆದುದರಿಂದಲೇ ಅವರ ಕವನ ಪ್ರಾರಂಭವಾಗುವುದು ಹೀಗೆ :

ಈ ಛತ್ರಿ ನನ್ನದು; ನನಗೂ ಇದಕ್ಕೂ ಬಹಳ ಕಾಲದ ನಂಟು.
ಮಳೆ ಬಿಸಿಲಲ್ಲಿ ಇದು ನನ್ನ ಎಡಬಿಡದ ಸಂಗಾತಿ. ಬರಿ
ಛತ್ರಿಯಲ್ಲ ಇದು ಪ್ರಶ್ನಾರ್ಥಕ ಚಿಹ್ನೆ ! ಈ ಪ್ರಶ್ನೆಯನು
ಹಿಡಿದು ನನ್ನ ದಾರಿಯ ನಾನು ತಿಳಿಯದ ದಿನವೆ
ಇಲ್ಲವೆಂದರು ಸರಿಯೆ, ಪ್ರಶ್ನೆಯಿಲ್ಲದ ಬದುಕೊಂದು
ಬದುಕೆ ? ನನಗಿಲ್ಲ ಪೂರ್ಣವಿರಾಮವನ್ನರಸಿ
ನಡೆಯುವ ಬಯಕೆ. ಈ ಪ್ರಶ್ನೆಯ ಕೆಳಗೆ ಮಡಚಿರುವ
ಸಂಶಯದ ನೆರಳ ಬಿಚ್ಚಿ ನಡೆಯುವುದು ನನಗಿಷ್ಟ !
ಹೆಂಗಸರ ಛತ್ರಿಯೇ ವಿಸ್ಮಯದ ಚಿಹ್ನೆ.
ಅದರಿಂದಲೆ ಅವುಗಳಿಗಿಷ್ಟು ಬಣ್ಣ ಬೆಡಗು. ಪ್ರಶ್ನೆ
ಯಿಂದ ವಿಸ್ಮಯದ ತನಕ ಹಬ್ಬಿದೆ ಬದುಕು ಎರಡು
ಛತ್ರಿಯ ನಡುವೆ. ಹೆಣ್ಣಿಗೆ ಗಂಡು ಪ್ರಶ್ನೆ, ಗಂಡಿಗೆ ಹೆಣ್ಣು
ವಿಸ್ಮಯ; ಅದಕ್ಕುಚಿತವಾಗಿದೆ ಛತ್ರಿಯ ಮಾಟ
ಇದರೊಳಗು ಇರಬಹುದು ಮಾಡಿದಾತನ ಹೂಟ.

['ನನ್ನ ಛತ್ರಿ'- ಅನಾವರಣ]

ಈ ಕವನದ ವಸ್ತು ನವ್ಯ, ವಿವರಣೆಯ ರೀತಿ ನವ್ಯ. ಆದರೆ ಮುಕ್ತಾಯ ಮಾತ್ರ ನವೋದಯದ ಮಾದರಿ. ಬಹುಶಃ ಈ ಕವನವನ್ನೇ ಓದಿ ಕಣವಿಯವರು 'ಸ್ನೇಹ ಕಾರ್ತಿಕ'ದಲ್ಲಿ ಶಿವರುದ್ರಪ್ಪನವರ ಕವಿ-ಕೃತಿ ದರ್ಶನವು ಬೆರಗಿನಿಂದ

ನಿಬ್ಬೆರಗು, ಎಂಬುದಾಗಿ ವಿವರಿಸಿರಬಹುದು. ಶಿವರುದ್ರಪ್ಪನವರ ಇಂದಿನವರೆಗಿನ ಕಾವ್ಯದಲ್ಲಿ, ಅನೇಕ ಸಲ ಪ್ರಶ್ನೆಗಳನ್ನು ಕುರಿತು ಕವನಗಳಿವೆ. 'ನಾನೇಕೆ ಬರೆಯುತ್ತೇನೆ' ಎಂಬ ಪ್ರಶ್ನೆಯನ್ನು ಕುರಿತು ಶಿವರುದ್ರಪ್ಪನವರು ಅನೇಕ ಕವನಗಳಲ್ಲಿ ಸಹೃದಯರೊಂದಿಗೆ ಮಾತನಾಡಿದ್ದಾರೆ. ಈ ಕವಿ ನಿವೇದಕನಾಗಿ, ನಿರ್ವಹಣೆಯ ಕಾರ್ಯವನ್ನು ಮಾಡುತ್ತ, ಮಾತನಾಡುತ್ತಾನೆ, ಜನರನ್ನು ಮಾತನಾಡಿಸುತ್ತಾನೆ.

ಡಾ. ಶಂಕರ ಮೊಕಾಶಿ ಪುಣೇಕರ ಅವರು ಅವರ 'ಅಭಿರುಚಿ' (ಮಿತ್ರ ಪ್ರಕಾಶನ, ಮೈಸೂರು ೧೯೬೧) ಎಂಬ ವಿಮರ್ಶಾತ್ಮಕ ಲೇಖನಗಳ ಗ್ರಂಥದಲ್ಲಿ 'ಕವಿಯ ವ್ಯಕ್ತಿತ್ವ; ನವೋದಯ ಕಾವ್ಯದಲ್ಲಿ' ಎಂಬ ಚಿಂತನೀಯ ಲೇಖನವನ್ನು ಬರೆದಿದ್ದಾರೆ. 'ನವ್ಯ ಕವಿಗಳಿಗೆ ಮುಂಜಾವು, ಸಂಜೆ, ಕೊಳ, ಕಮಲ, ಕೋಗಿಲೆಗಳೆಂದರೆ ಸಿಟ್ಟು ಬಹಳ, ವ್ಯಕ್ತಿತ್ವದ ಅಭಿವ್ಯಕ್ತಿಯನ್ನೇ ಕಾವ್ಯದ ವ್ಯಾಖ್ಯೆಯೆಂದು ಗ್ರಹಿಸಿದ ನವ್ಯರಿಗೆ ಸಹನವಾಗುವ ಕಾವ್ಯ ವಸ್ತುವೆಂದರೆ ಒಂದೇ 'ನಾನು'. ನಾನು ಎಂಬ ವಿಷಯದೊಳಗಿಂದಲೇ ಇವರ ಸ್ಫೂರ್ತಿ ಎಲ್ಲವೂ ಬರಬೇಕು' ಎಂಬುದಾಗಿ ಮೂರು ಲಕ್ಷಣಗಳನ್ನು ವಿವರಿಸಿದ್ದಾರೆ, ಮೊದಲನೆಯ ಲಕ್ಷಣದ ಪ್ರಕಾರ ಆಲೋಚಿಸಿದರೆ, ಕಣವಿ ಮತ್ತು ಶಿವರುದ್ರಪ್ಪನವರು ನವ್ಯ ಕವಿಗಳ ಮಾಲೆಯಲ್ಲಿ ಸೇರ್ಪಡೆಯಾಗುವಂಥವರೇ ಅಲ್ಲ ಎಂಬುದು ಅತ್ಯಂತ ಸ್ಪಷ್ಟ. ಮುಂದಿನ ಎರಡು ಲಕ್ಷಣಗಳನ್ನು ಗಮನಿಸಿದಾಗ ಶಿವರುದ್ರಪ್ಪನವರ ಕವನಗಳಲ್ಲಿ ನಾನು, ನನ್ನ ಎಂಬ ಪ್ರಯೋಗವು, ಕಣವಿಯವರ ಕವನಗಳಲ್ಲಿ ಇರುವುದಕ್ಕಿಂತ ಹೆಚ್ಚಾಗಿರುವುದು ಕಂಡು ಬರುತ್ತದೆ. ಆದುದರಿಂದ ಕೆಲ ವಿಮರ್ಶಕರು ಕಣವಿ ಮತ್ತು ಶಿವರುದ್ರಪ್ಪನವರು ಎರಡೂ ಕಾವ್ಯ ಮಾರ್ಗಗಳೊಂದಿಗೆ ಒಪ್ಪಂದ ಮಾಡಿಕೊಂಡ ಸಮನ್ವಯ ಮಾರ್ಗದ ಕವಿಗಳೆಂದು ಗುರುತಿಸಿರಲು ಸಾಕು. ನನ್ನ ದೃಷ್ಟಿಯಲ್ಲಿ ಇವರಿಬ್ಬರೂ, ಎರಡೂ ಕಾವ್ಯ ಮಾರ್ಗಗಳನ್ನು ತಮ್ಮ ಕಾವ್ಯದ ಜೀವಾಳದಲ್ಲಿ ಸಮರಸ ಪಡಿಸಿಕೊಂಡ ಕವಿಗಳೇ ಹೊರತು ಸಮನ್ವಯ ಮಾರ್ಗದ ಕವಿಗಳಲ್ಲ. ನನ್ನ ಈ ನಿರ್ಣಯಕ್ಕೆ ಶಿವರುದ್ರಪ್ಪನವರ ಇತ್ತೀಚಿನ ಕವನ 'ಸಂದಿಗ್ಧ' (ಪ್ರೀತಿ ಇಲ್ಲದ ಮೇಲೆ) ಪ್ರಬಲವಾದ ಆಧಾರ. ಒಪ್ಪಂದ ಎಂಬುದು ರಾಜಕಾರಣ; ಸಮರಸತೆ ಕಾವ್ಯದ ಅಂತರಂಗದ ಪ್ರಭೆ!

ತೀ. ನಂ. ಶ್ರೀ. ಕಣವಿ ಮತ್ತು ಶಿವರುದ್ರಪ್ಪನವರಿಗೆ ಅತ್ಯಂತ ಪೂಜ್ಯರಾದ ವ್ಯಕ್ತಿ. ತೀ. ನಂ. ಶ್ರೀಯವರ ಮರಣದ ಸುದ್ದಿಯಿಂದ ತಳಮಳಿಸಿದ ಕವಿಜೀವ;

ಮೈಸೂರು–ಧಾರವಾಡದ ಉತ್ತರೋತ್ತರಕೆ
ಸಂದಿತು ಹರಕೆ, ದಿಲ್ಲಿಯನು ದಾಟಿ ಕಲಕತ್ತೆ.

– – – – –

– – – – –

ಪ್ರೀತಿ ಪಾಥೇಯವನು ಕೈಕೊಂಡು ಬಲುದಿನದ
ಪಯಣಕ್ಕೆ ಹೊರಟುಬಿಟ್ಟರು ನಮ್ಮ ತೀ. ನಂ. ಶ್ರೀ.
'ಇಂದಿಲ್ಲ ನಾಳೆ ಬಂದು, ಎಲ್ಲಿಗೆ ಬಂತು ಕೆಲಸ ?
ಎಂದಾರು; ಈ ಗುಡಿಗೆ ಯಾರಿಡಬೇಕು ಕಳಸ ?

['ತೀ, ನಂ. ಶ್ರೀ' – ಎರಡು ದಡ]

ಎಂದು ಆಶ್ಚರ್ಯಪಟ್ಟಿದೆ. ಇದೇ ಬಗೆಯು ಆಶ್ಚರ್ಯೋದ್ಗಾರವ ಶಿವರುದ್ರಪ್ಪನವರ ಪ್ರತಿಭೆಯು. ತೀ. ನಂ. ಶ್ರೀಯವರ ವ್ಯಕ್ತಿತ್ವವನ್ನು ಅನಾವರಣಗೊಳಿಸುವುದು ಹೀಗೆ;

ನೋಡಿದರೆ ನೋಡಿದಷ್ಟೂ ಇಷ್ಟ
ಮಾತೊ ಮಿತ, ಖಚಿತ, ನಿಷ್ಕೃಷ್ಟ
ಪರಿಪೂರ್ಣತೆಯ ಅತೃಪ್ತ ಅನ್ವೇಷಕ
ಪ್ರತಿಭೆ–ಪಾಂಡಿತ್ಯಗಳ ಹದವಾದ ಪಾಕ.
ಇನ್ನಾರು ಬೆಳೆದಾರು ನಿಮ್ಮ ಎತ್ತರಕೆ ?
ಕನ್ನಡದ ಕೊರಳಲ್ಲಿ ಶ್ರೀಕಂಠಿಕೆ !

['ತೀ. ನಂ. ಶ್ರೀ' – ಗೋಡೆ]

'ಕುಟುಂಬ ನಿಯೋಜನೆ' ರಾಷ್ಟ್ರೀಯ ಸಮಸ್ಯೆ. ಈ ಸಮಸ್ಯೆಯ ಪರಿಹಾರಕ್ಕಾಗಿ ಪ್ರಚಾರ, ಪ್ರಸಾರ ವಿಪುಲ. ಇಂಥದನ್ನು ಕಂಡ ಕಣವಿ

– – – – –

– – – – –

ಹೊಲತುಂಬ ಸಿಕ್ಕಂತೆ ಬೀಜ ಚೆಲ್ಲಿದರೆ ಬರುವುದೆಲ್ಲ ಬೆಳೆಯಲ್ಲ, ಕಳೆ. ಎಡೆ
ಬಿಡದೆ ಸುರಿದರೆ ಮಳೆ, ಹರಿಯುವುದು ಹುಚ್ಚು ಹೊಳೆ.

– – – – –

– – – – –

ಬ್ರಹ್ಮದೇವನಿಗು ಬಿಡುವಿಲ್ಲ
ಯಮದೇವನಿಗೂ ತಡವಿಲ್ಲ

ಮಹಾದೇವನು ಮಾತ್ರ ಗೌರಿಯೊಡನೆ ನಸುನಗುತ್ತ
ಗುಹ, ಗಣಪತಿ ಇಬ್ಬರ ಜೊತೆಗೂಡಿ
ಲಕ್ಷಣವಾಗಿ ಹೇಗೆ ಕುಳಿತಿದ್ದಾನೆ ನೋಡಿ.
ಮಾತು ಗದ್ಯಕ್ಕಿಳಿಯಿತೆಂದು ಬೇಸರಪಡಬೇಡಿ ;
ಪದ್ಯದಲ್ಲೂ ಹತ್ತು ಕಟ್ಟುವ ಕಡೆಗೆ ಒಂದು ಮುತ್ತು ಕಟ್ಟುವುದುಂಟು,
ಹಾಗಿದ್ದರೇನೆ ಅದಕ್ಕೆ ಬೆಲೆಯುಂಟು.

['ಕುಟುಂಬ ಸೌಖ್ಯದ ಆಖ್ಯಾನ' – ನಗರದಲ್ಲಿ ನೆರಳು]

ಒಂದು ಪೌರಾಣಿಕ ಕಥೆಯ ಆಧಾರದಿಂದ 'ಮಿತ ಸಂತಾನ'ದ ವಿಷಯವನ್ನು ಕಣವಿಯವರು ಪ್ರತಿಪಾದಿಸಿದರೆ; ಶಿವರುದ್ರಪ್ಪನವರು ಆ ವಿಷಯವನ್ನೇ ರಾಜಕಾರಣಕ್ಕೂ, ಕವಿಸೃಷ್ಟಿಗೂ, ಮಾನವನ ಮನಸ್ಸಿಗೂ ಅನ್ವಯಿಸಿ ಉದ್ದೀಪನವನ್ನುಂಟು ಮಾಡುತ್ತಾರೆ. ಅದು ಹೀಗೆ :

ಎಲ್ಲರಿಗೂ ಬೇಕು, ನಮಗೆ ಮತ್ತು ನಿಮಗೆ
ಬೇಕು ಕುಟುಂಬ ಯೋಜನೆಯ ತತ್ತ್ವ ಮಂತ್ರಿಗಳ ಸಂಖ್ಯೆಗೆ
ಪರದೇಶದಿಂದ ಪಡೆದ ಸಾಲಕ್ಕೆ; ಕವಿ ಬರೆವ
ಕವಿತೆಗೆ; ಆಡುಮಾತಿಗೆ, ಹರಿವ ಮನಸ್ಸಿಗೆ
ಕೊರೆವ ಉಪನ್ಯಾಸಕ್ಕೆ; ಎಲ್ಲದಕ್ಕೂ ಬೇಕು
ಈ ನಿರೋಧದ ಬ್ರೇಕು.

['ಕುಟುಂಬ ಯೋಜನೆಯ ವಿಚಾರ' – ಗೋಡೆ]

ಕಣವಿಯವರ 'ಜೀವಧ್ವನಿ'ಯಲ್ಲಿ 'ಮನು' ಎಂಬ ನಾಯಿಯ ಕಥೆ ಮನೆಮನೆಯಲ್ಲಿ ನಾಯಿಯನ್ನು ಸಾಕುವವರು ಪಡೆಯುವ ಅನುಭವಗಳನ್ನೆಲ್ಲ ಬಿಚ್ಚಿಬಿಚ್ಚಿ ಚಿತ್ರಿಸಿದರೆ, ಶಿವರುದ್ರಪ್ಪನವರು 'ಕಾಡಿನ ಕತ್ತಲಲ್ಲಿ' ಬ್ರಾಹ್ಮಣ ಮತ್ತು ನಾಲ್ಕು ಖದೀಮರ ಜನಪ್ರಿಯ ಕಥೆಗೆ ರೋಚಕವಾದ ರೂಪವನ್ನು ಕೊಡುತ್ತಾರೆ.

ಕಣವಿಯವರು 'ಕಾರ್ತಿಕದ ಮೋಡ'ದಲ್ಲಿ
ಸ್ನೇಹ, ಪ್ರೀತಿ, ವಿಶ್ವಾಸ, ಹಾಸ, ಮಧುಮಾಸ ತುಂಬಿದೊಸಗೆ
ವಧುವಿನಂತೆ ನಸುನಾಚಿ, ನಮಿಸಿ ಈ ಜೀವ ಬಂತು ಹಸೆಗೆ.

['ಅಭಿವಂದನೆ' – ಕಾರ್ತಿಕದಮೋಡ]

ಎಂಬುದಾಗಿ, ಜೀವನಮೌಲ್ಯಗಳಿಗೆ ಅಭಿವಂದನೆಗಳನ್ನು ಸಲ್ಲಿಸಿ ನಮಿಸಿದ್ದಾರೆ. ಶಿವರುದ್ರಪ್ಪನವರ ಅಭಿಪ್ರಾಯವೂ ಅದೇ. ಹಳೆಯ ಮೌಲ್ಯಗಳು ಮಾಯವಾಗಿವೆ, ಹೊಸ ಮೌಲ್ಯಗಳು ಇನ್ನೂ ನಿರ್ಮಾಣಗೊಂಡಿಲ್ಲ. ನಾವು ಬದಲಾಗದೆ ನಮ್ಮ ಸುತ್ತಣ ಜಗತ್ತು ಬದಲಾಗುವುದಿಲ್ಲ. ಜಗತ್ತಿನೊಂದಿಗೆ ಅನುರಕ್ತ ಅಥವಾ ಪ್ರೀತಿ ಸಂಬಂಧವನ್ನು ಪಡೆದುಕೊಳ್ಳಲಾರದೆ, ನಾವು ಯಾವುದಕ್ಕೂ ಸ್ಪಂದಿಸಲಾರೆವು ಎಂಬುದು ಶಿವರುದ್ರಪ್ಪನವರ ಇಂದಿನ ಭದ್ರವಾದ ನಿಲುವು. ಆದುದರಿಂದಲೇ ಅವರು ಕೇಳುತ್ತಾರೆ.

ಪ್ರೀತಿ ಇಲ್ಲದ ಮೇಲೆ
ಹೂವು ಅರಳೀತು ಹೇಗೆ ?
ಮೋಡ ಕಟ್ಟೀತು ಹೇಗೆ ?
ಹನಿಯೊಡೆದು ಕೆಳಗಿಳಿದು
ನೆಲಕ್ಕೆ ಹಸಿರು ಮೂಡೀತು ಹೇಗೆ ?
... ... ... ... ... ...
... ... ... ... ... ....
ನಮ್ಮ ನಿಮ್ಮ ಮನಸ್ಸು
ಮರುಭೂಮಿಯಾಗದ ಹಾಗೆ
ತಡೆಗಟ್ಟುವುದು ಹೇಗೆ ?

[‘ಪ್ರೀತಿಯಿಲ್ಲದ ಮೇಲೆ’ — ಪ್ರೀತಿ ಇಲ್ಲದ ಮೇಲೆ]

ಕಣವಿಯವರ ‘ಜೀನಿಯಾ’ ಎಂಬ ಈಗಿನ ಹೊಚ್ಚ ಹೊಸ ಕವನ ಸಂಗ್ರಹ ದಲ್ಲಿ ಅವರ ನಿಸರ್ಗ ಪ್ರೀತಿ, ಹೂವಿನೊಂದಿಗಿರುವ ಸಂಬಂಧ, ತೋಟಗಾರಿಕೆಯ ಹವ್ಯಾಸ ಪುಟಿದೆದ್ದಿವೆ. ಇದರೊಂದಿಗೆ ‘ಕನ್ನಡ ಜ್ಯೋತಿಯ ದೀಪಗಳು’ ಎಂಬ ಅಭಿಮಾನವೂ ಇದೆ; ‘ಕನ್ನಡ ಕ್ರಿಯಾ ಸಮಿತಿಯು’ ಮುಂದಾಳುತನವೂ ವ್ಯಕ್ತ ವಾಗಿದೆ. ‘ನಗರದಲ್ಲಿ ನೆರಳು’ ಸಂಗ್ರಹದೊಳಗಿನ ‘ಬರೆಯಲೊಲ್ಲದ ಕವಿತೆ’ ಮತ್ತು ‘ಜೀವಧ್ವನಿ’ ಯೊಳಗಿನ ‘ಜೋಳದ ಪಾಳಿ’ ಕವನಗಳಲ್ಲಿ ಕಣವಿ ಮತ್ತು ನಿಸರ್ಗದ ಸಂಬಂಧದ ಶಿಖರಗಳಿವೆ.

ಪುನರ್ವಸು, ಪುಷ್ಯ
ಮಳೆಗರೆದಾಗ ಈ ಮನುಷ್ಯ
ಹೊರ ಬಂದು ಗುದ್ದಲಿ, ಸಲಿಕೆ, ಪಿಕಾಶಿ
ಬಳಸಿ ಅಗೆವಗೆದು ಬಳಿದು ಕೈಯಾಡಿಸಿದ

ಎಂಬ ಮಾತು ಕಾವ್ಯ ಕ್ರಿಯೆಗೂ ಚೆನ್ನಾಗಿ ಅನ್ವಯಿಸುತ್ತದೆ. "ಬರೆದ ಕವಿತೆಯ ಭಾರ, ಬರೆಯುದ ಕವಿತೆಗಿಂತ ಹೆಚ್ಚಲ್ಲ" ಎಂದಿದ್ದಾರೆ ಕಣವಿ.

ಈ ರೀತಿಯಾಗಿ ಕಣವಿ ಮತ್ತು ಶಿವರುದ್ರಪ್ಪನವರ ಪ್ರತಿಭೆಗೆ ನದಿಯ ಓಘವಿದೆ ಮತ್ತು ಜೀವಂತಿಕೆಯೂ ಇದೆ.

ಕಣವಿಯವರು, ಐವತ್ತಕ್ಕೂ ಹೆಚ್ಚು ವ್ಯಕ್ತಿಗೀತಗಳನ್ನು ರಚಿಸಿದ್ದಾರೆ. ಸಾನೆಟ್ ರಚನೆಯಲ್ಲಿ ಉನ್ನತವಾದ ಸಿದ್ಧಿಯನ್ನು ಪಡೆದಿದ್ದಾರೆ. ಕಣವಿಯವರ ಕಾವ್ಯವು ಹಳೆಯ ತಲೆಮಾರಿನ ಕನ್ನಡದ ಪುಣ್ಯಪುರುಷರ ಹಿರಿಮೆಯನ್ನು ತರುಣ ಪೀಳಿಗೆಗೆ ತಿಳಿಸಿಕೊಡುವಲ್ಲಿ ಯಶಸ್ಸನ್ನು ಸಂಪಾದಿಸಿದೆ. ಇಷ್ಟು ವ್ಯಕ್ತಿಗೀತಗಳನ್ನು ಶಿವರುದ್ರಪ್ಪನವರು ಸೃಷ್ಟಿಸಿಲ್ಲ. ಶಿವರುದ್ರಪ್ಪನವರು ಹೊರ ಅರಳುವಿಕೆ ಹೆಚ್ಚು. ಆದುದರಿಂದ ಕಾವ್ಯದ ಒಂದು ಮೈಗೆ ಹರಿತ ಹೆಚ್ಚು. ಕಣವಿಯವರ ಚೈತನ್ಯಕ್ಕೆ ಒಳ ಅರಳುವಿಕೆ ಪ್ರಿಯವಾಗಿದ್ದರಿಂದ, ಅದು ಮಂದಸ್ಮಿತದಲ್ಲಿ ವಿಲಾಸವನ್ನು ಪಡೆಯುತ್ತದೆ. ಶಿವರುದ್ರಪ್ಪನವರಿಗೆ ಕಣವಿಯವರಿಗಿಂತ ಹೆಚ್ಚು ವೈವಿಧ್ಯದ ಮತ್ತು ಜವಾಬುದಾರಿಯ ಭಾರ ಬೀಳುತ್ತ ಹೋದುದು ಇತಿಹಾಸದ ಮಹಿಮೆ, ಕಣವಿಯವರು, ಷೇಕ್ಸಪಿಯರನ ಕೆಲವು ಸುನೀತ ಮತ್ತು ರವೀಂದ್ರನಾಥ ಟಾಗೋರ ಅವರ ಅನೇಕ ಗೀತಗಳನ್ನು ಅನುವಾದಿಸಿದ್ದಾರೆ. 'ತೀರ್ಥವಾಣಿ' ಯೊಂದೇ ಶಿವರುದ್ರಪ್ಪನವರ ಪ್ರಮುಖವಾದ ಅನುವಾದಿತ ಕವನಗಳ ಸಂಗ್ರಹ. ಇಬ್ಬರಿಗೂ ಅನುವಾದದಲ್ಲಿ ಪುನರ್‌ಸೃಷ್ಟಿ ಮಾಡುವ ಸಾಮರ್ಥ್ಯವಿದೆ ಎಂಬುದು ನಿರ್ವಿವಾದ. ಇಬ್ಬರ ಗೇಯ ಗೀತಗಳನ್ನು ಕನ್ನಡದ ಗಾಯಕರು ಹಾಡಿ ಸುಖ ಪಟ್ಟಿದ್ದಾರೆ; ಶ್ರೋತೃಗಳಿಗೆ ಸುಖ ಕೊಡುತ್ತಲಿದ್ದಾರೆ. ಕಣವಿಯವರದು ಆಡು ಮಾತಿನ ಮೋಡಿ ಶಿವರುದ್ರಪ್ಪನವರದು ಶಿಷ್ಟಭಾಷೆಯ ಉನ್ನತಿ !

ಈ ಪ್ರಮುಖ ಕವಿಗಳನ್ನು ಕುರಿತು ಅಭಿನಂದನ ಗ್ರಂಥಗಳ ಅರ್ಪಣೆಯಾಗಿದ್ದರೂ, ಇನ್ನೂ ಹೇಳಬೇಕಾದ ಮಾತುಗಳು ಸಾಕಷ್ಟಿವೆ.

ಕಣವಿಯವರ 'ಹೊಂಬೆಳಕು' ಸಂಕಲನವನ್ನು ಕುರಿತು ಪ್ರಸ್ತಾವನೆಯನ್ನು ಡಾ. ಜಿ. ಎಸ್.ಆಮೂರ ಅವರು ಅತ್ಯಂತ ಪ್ರೌಢವಾಗಿ ಬರೆದಿದ್ದಾರೆ. ಅದರೊಳಗಿನ ಮಂಥನದಿಂದ ಹೊರಟ ಕೆಲವು ವಿಚಾರಗಳು ಹೀಗೆ ಇವೆ —

೧. "ಕಣವಿಯವರ ಕಾವ್ಯ ಜೀವನದ ಎದ್ದು ಕಾಣುವ ವೈಶಿಷ್ಟ್ಯವೆಂದರೆ ಎಲ್ಲ ಸಮಕಾಲೀನ ಸಾಹಿತ್ಯ ಚಳುವಳಿಗೆ ಪ್ರತಿಸ್ಪಂದಿಸಿಯೂ, ಯಾವುದಕ್ಕೂ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಳ್ಳದೇ ಇರುವುದು.

೨. ತಮ್ಮ ಕಾವ್ಯ ಪ್ರತಿಭೆಯ ಸ್ವರೂಪವನ್ನು ಸ್ವವಿಮರ್ಶೆಯಿಂದ ಗುರುತಿಸಿ, ಅದರ ವಿಕಾಸಕ್ಕೆ ಅನುಕೂಲವಾಗಬಲ್ಲ ಅಂಶಗಳನ್ನು ಮಾತ್ರ ಅವರು ತಮ್ಮಲ್ಲಿ ಅಳವಡಿಸಿಕೊಳ್ಳುತ್ತ ಬಂದಿದ್ದಾರೆ. ಇದರಿಂದಾಗಿಯೇ ಅನೇಕ ಪ್ರಭಾವ ಗಳನ್ನು ಅರಗಿಸಿಕೊಂಡೂ ತಮ್ಮ ಸ್ವಂತದ ಪ್ರತಿಭೆಯನ್ನು ಮೆರೆಯುವುದು ಅವರಿಗೆ ಸಾಧ್ಯವಾಗಿದೆ.

೩. ಸಮರ್ಪಣೆ, ಸಮದರ್ಶನ, ಸ್ವೀಕೃತಿ, ಮಹತ್ ಅಭೀಪ್ಸೆ, ಅತ್ಮಕೃಷೀ ಇಂಥ ಮೌಲ್ಯಗಳ ಉಪಾಸನೆಯ ಸಂಕಲ್ಪ, ಕಣವಿಯವರ ಮೊದಲ ಹಂತದ ಕಾವ್ಯದ ಮುಖ್ಯ ಪ್ರೇರಣೆ.

೪. ಬೇಂದ್ರೆಯವರಂತೆ ಕಣವಿ ಕೂಡ ಹಾಡುವ ಕವಿ.

೫. ವರ್ಣಕ-ಚಿಂತಕ ಕವನಗಳಲ್ಲಿ ಚಿಂತನೆಗೆ ಪ್ರಾಮುಖ್ಯವಿರುತ್ತದೆ. ಆದರೆ ಕಣವಿಯವರ ಕವಿತೆಗಳಲ್ಲಿ ವರ್ಣನೆಯದೆ ಮೇಲುಗೈ. ಶ್ರೇಷ್ಠ ದರ್ಜೆಯ ಕಲ್ಪಕತೆಗೆ ಮಾತ್ರ ಸಾಧ್ಯವಾಗುವ ಅನೇಕ ಶಬ್ದ ಚಿತ್ರಗಳನ್ನು ಅವರು ಸೃಷ್ಟಿಸಿದ್ದಾರೆ.

೬. ನವ್ಯ ಕಾವ್ಯದ ಪರಂಪರೆಯಲ್ಲಿಯೂ, ವಾತ್ಸಲ್ಯಗೀತೆಗಳನ್ನು ಬರೆದುದು ಕಣವಿಯವರ ವೈಶಿಷ್ಟ್ಯ.

೭. ಕಾವ್ಯ ತಂತ್ರಕ್ಕೂ ಕಣವಿಯವರ ಜೀವನ ದರ್ಶನಕ್ಕೂ ಬಿರುಕು ಕಾಣುವದಿಲ್ಲ.

೮. ನವ್ಯ ಜೀವನದರ್ಶನದ ಸಾಮಾನ್ಯ ಲಕ್ಷಣವೆಂದರೆ ಆಧುನಿಕತೆಯ ವಿರೋಧ ಮತ್ತು ತಿರಸ್ಕಾರ.

೯. ನವ್ಯ ಕಾವ್ಯದ ಅಗ್ನಿ ದಿವ್ಯದಲ್ಲಿ ಕಣವಿಯವರ ಕಾವ್ಯ ತನ್ನ ಆಶಯ ಆಕಾರ ಗಳ ಮುಗ್ಧತೆಯನ್ನು ಕಳೆದುಕೊಂಡು ಪ್ರಬುದ್ಧತೆಯನ್ನು ದೊರಕಿಸಿ ಕೊಂಡಿತು. ಸೌಂದರ್ಯ ಪಕ್ಷಪಾತದ ಜೋಲಿಯಿಂದ ಸುಧಾರಿಸಿಕೊಂಡು. ಅಸುಂದರವಾದುದರ, ಅಸಹ್ಯವಾದುದರ ಅರ್ಥವಂತಿಕೆಯನ್ನೂ ಗ್ರಹಿಸಿ, ಜೀವನವನ್ನು ಸಮಗ್ರವಾಗಿ ನೋಡುವ ಸಂಕೀರ್ಣ ದೃಷ್ಟಿಯನ್ನು ಪಡೆದು ಕೊಂಡಿತು. ತನ್ನ ಮೂಲ ದ್ರವ್ಯವಾದ ಜೀವಸತ್ತ್ವದಲ್ಲಿಯ ಶ್ರದ್ಧೆಯ ನ್ನಾಗಲಿ, ಸೃಜನ ಶೀಲತೆಯ ಲವಲವಿಕೆಯನ್ನಾಗಲಿ ಅದು ಕಳೆದುಕೊಳ್ಳಲಿಲ್ಲ.

ನರಹಳ್ಳಿ ಬಾಲಸುಬ್ರಹ್ಮಣ್ಯಂ ಅವರು—

೧. ಕಣವಿಯವರ ಕಾವ್ಯದಲ್ಲಿ ಸಂಘರ್ಷವಿಲ್ಲ ಒಪ್ಪಂದವಿದೆ.

೨. ಶಿವರುದ್ರಪ್ಪನವರು ಸಮಾಜದ ಕೊಳಕುತನದಿಂದ ವ್ಯಗ್ರರಾಗುತ್ತಾರೆ; ಕಣವಿಯವರು ಮುಗುಳ್ನಗೆಯಲ್ಲಿ ಉತ್ತರಿಸುತ್ತಾರೆ.

೩. ಕಣವಿಯವರದು ಮೆಲುದನಿಯ ಕಾವ್ಯ; ಶಿವರುದ್ರಪ್ಪನವರ ಕಾವ್ಯಕ್ಕೆ ಪ್ರಪಾತದ ನಾದವಿದೆ— ಎಂದು ಕೆಲವು ಲಕ್ಷಣಗಳನ್ನು ಗುರುತಿಸಿದ್ದಾರೆ. ಇವು ಇಬ್ಬರ ಸ್ವಭಾವ ಲಕ್ಷಣಗಳೆ ಹೊರತು, ಕಾವ್ಯ ಲಕ್ಷಣ ಗಳಲ್ಲ. ಶಿವರುದ್ರಪ್ಪನವರ ಸಂಘರ್ಷ ಮನೋವೃತ್ತಿ, ಅವರ ಸ್ಥಳಾಂತರ ಗಳಿಗೆ ಕಾರಣವೂ ಇರಬಹುದು. ಕಣವಿಯವರ ಒಪ್ಪಂದ ಮನೋವೃತ್ತಿ ಅವರನ್ನು ಧಾರವಾಡಕ್ಕೆ ಕಟ್ಟಿ ಹಾಕಿರಲೂಬಹುದು. ಕಾವ್ಯವಿಷಯದಲ್ಲಿ ಮಾತ್ರ ಇಬ್ಬರೂ, ವಿಹಾರ ಸ್ವಾತಂತ್ರ್ಯವನ್ನು ಕಾಪಾಡಿಕೊಂಡಿರುವ ಹಕ್ಕಿಗಳು !

ಶಿವರುದ್ರಪ್ಪನವರ ಸಮಗ್ರ ಕಾವ್ಯಕ್ಕೆ ಡಾ. ಕೆ. ವಿ. ನಾರಾಯಣ 'ನಂಬು ಗೆಯ ಹಾದಿ'ಯಲ್ಲಿ ಬರೆಯುವುದು ಹೀಗೆ,

೧. ಜಿ. ಎಸ್. ಶಿವರುದ್ರಪ್ಪನವರ ಕವನಗಳಲ್ಲಿ ಎದ್ದು ಕಾಣುವ ಗುಣ ಪ್ರಸಾದ.

೨. ಕವಿ ಕಾವ್ಯ ಶರೀರವನ್ನು, ಪದಸಂಯೋಜನೆಯನ್ನು ಬಳಸುವುದು; ಅರ್ಥ ವನ್ನು ಓದುಗನಿಗೆ ಸಂಹನಗೊಳಿಸುವದು ಮತ್ತು ಪಾರದರ್ಶಕ ಮಾಧ್ಯಮ ವನ್ನಾಗಿ ಏರ್ಪಡಿಸುವುದರಲ್ಲಿ ಯಶಸ್ವಿ ಎಂಬುದು ಸ್ಪಷ್ಟ.

೩. ಕವಿ, ತನ್ನ ಅನುಭವಜನ್ಯ ಭಾವ ಇಲ್ಲವೆ ಅರ್ಥಗಳನ್ನು ಭಾಷಿಕವಾಗಿ ನಿರೂ ಪಿಸುತ್ತಾರೆ. ಆ ಮೂಲಕ ಅನುಭವದ ಗ್ರಹಿಕೆಯನ್ನು ಕವಿತೆಯ ರಚನೆಯ ಮೂಲಕ ದಾಖಲಿಸಿ ಬಿಡುಗಡೆ ಮಾಡುತ್ತಾರೆ.

೪. ಶಿವರುದ್ರಪ್ಪನವರ ಕಾವ್ಯದಲ್ಲಿ ಜೀವನ ಸಮೃದ್ಧ ಪ್ರಕೃತಿ, ಮತ್ತು ಮಾನವ ಕೇಂದ್ರಿತ ಸಮಾಜದ ಚಿತ್ರಣವನ್ನು ಕಾಣುತ್ತೇವೆ.

೫. ಮಾನವ ಕೇಂದ್ರಿತ ಸಮಾಜದಲ್ಲಿ ಕವಿತೆಗಳ ನಿರೂಪಕ ಕಾಣುವುದು ಸಮರಸ ವಿಲ್ಲದ ಜೀವನ.

೬. ಪ್ರಕೃತಿ ಕೇಂದ್ರಿತ ಕವಿತೆಗಳಲ್ಲಿರುವ ವಿಸ್ಮಯ, ಉತ್ಸುಕತೆಗಳ ಬದಲಾಗಿ ಭಿನ್ನತೆ, ಸಾತ್ವಿಕ ಕ್ರೋಧ,ಹತಾಶೆಯ ಅಂಚಿನಲ್ಲಿ ಸುಳಿಯುವ ಅಸಹಾಯಕತೆ.

೭. ಅನಿಸಿದ್ದನ್ನು ಹಿಂಜರಿಯದೆ ಪ್ರತಿಪಾದಿಸುವ ಧೈರ್ಯ ಇದೆ.

೮. ಇವರದು ಮುಖ್ಯವಾಗಿ ನಂಬುಗೆಯ ಹಾದಿ.
ಡಾ. ಡಿ. ಆರ್. ನಾಗರಾಜ ಅವರು ಶಿವರುದ್ರಪ್ಪನವರ ವೈಶಿಷ್ಟ್ಯಗಳನ್ನು ವಿವರಿಸುವ ಬಗೆ ಹೀಗಿದೆ—

೧. ನವೋದಯ, ನವ್ಯ, ನವ್ಯೋತ್ತರ ಹೀಗೆ ಮೂರು ಕಾವ್ಯ ಮಾರ್ಗಗಳು ಇಲ್ಲಿ ತಮ್ಮ ಅಸ್ತಿತ್ವವನ್ನು ಸಾರಿವೆ, ಆದರೆಇವೆಲ್ಲವುಗಳ ಹಿಂದೆ ಬದಲಾವಣೆಗಳಿಂದಾಗಿ ಕರಗಿ ಹೋಗದ, ಕೊಚ್ಚಿ ಹೋಗದ ಸ್ವೋಪಜ್ಞ ವ್ಯಕ್ತಿತ್ವವೊಂದು ಕಾಣುತ್ತದೆ.

೨. ಶಿವರುದ್ರಪ್ಪನವರದು ಪ್ರಸನ್ನ ಕಾವ್ಯ.

೩. ಜಿ. ಎಸ್. ಎಸ್. ಅವರ ಕಾವ್ಯವನ್ನು ಚಾರಿತ್ರ್ಯದ ಅಭಿವ್ಯಕ್ತಿ ಎಂದು ಎಂದು ಕರೆಯಬಹುದು.

೪. ಈ ಸಮಗ್ರ ಕಾವ್ಯದ ಉದ್ದಕ್ಕೂ ಅನೇಕ ಪುನರ್‌ಜನ್ಮಗಳಾಗಿವೆ. ಹೀಗೆ ಪುನರ್‌ಜನ್ಮಗಳನ್ನು ಪಡೆಯ ಬಲ್ಲ ಶಕ್ತಿ, ಪ್ರತಿಭಾವಂತ ಕವಿಗಳಿಗೆ ಮಾತ್ರ ಸಾಧ್ಯ. ಇದಕ್ಕೆ ಜಿ. ಎಸ್. ಎಸ್. ಕಾವ್ಯವು ಸಾಕಷ್ಟು ಸಮರ್ಥನೆಗಳನ್ನು ಒದಗಿಸಿಕೊಡುತ್ತದೆ.

ಈ ಎಲ್ಲ ದಿಕ್ ಸೂಚಕ ವಿಚಾರಗಳ ಅವಗಾಹನೆಯನ್ನು ಕೂಲಂಕಷವಾಗಿ ಮಾಡಿದಾಗ ನನಗೆ ತೋರಿ ಬರುವುದು ಹೀಗೆ.

೧. ಕಣವಿ ಮತ್ತು ಶಿವರುದ್ರಪ್ಪನವರ ಕಾವ್ಯದಲ್ಲಿ ಸಮಾನ ಅಂಶಗಳೇ ಹೆಚ್ಚು.

೨. ಇಬ್ಬರಿಗೂ ಪರಂಪರೆಯಲ್ಲಿ ಶ್ರದ್ಧೆ, ವಿಶ್ವಾಸ, ನಂಬುಗೆ ಭದ್ರವಾಗಿದೆ.

೩. ಇಬ್ಬರಿಗೂ ಬೇಕಾದದ್ದು ಸ್ವಂತ ಜೀವನ, ಸಮಾಜ ಜೀವನ ಮತ್ತು ರಾಷ್ಟ್ರ ಜೀವನದಲ್ಲಿ ಆಳ, ಎತ್ತರ ಮತ್ತು ಶಿವಕಾರಕ ದರ್ಶನ.

೪. ಪಶ್ಚಿಮದಲಿ ಇಳಿದ ಕೆಂಬೆಳಕು
ಪೂರ್ವದಲಿ ಹೊಂಬೆಳಕು ತೂರುವುದು.
ಎರಡು ದಡಗಳ ನಡುವೆ ಹಾಯಿ ಬಿಚ್ಚಿದೆ ದೋಣಿ,
ಮುಳುಗಿ ಮಿನುಗಾಡುತಿವೆ ಮೀನು, ದೂರ ನೀಲ ಶ್ರೇಣಿ.

ಇವು ಕಣವಿಯವರ ಎರಡು ದಡಗಳಾಗಿರುವಂತೆಯೇ;

ಎರಡು ಶಿಖರದ ನಡುವೆ ಹಗ್ಗದ ದಾರಿ
ಕೆಳಗೆ ಕಪ್ಪು ಕಾಡಿನ ಕಣಿವೆ;
ಒಂಟಿ ಹಗ್ಗದ ಮೇಲೆ
ಡೊಂಬರಾಟದ ನಡಿಗೆ, ಕಾಲು ಜಾರುವ ತನಕ
ಚಿಂತೆಯಿಲ್ಲ. ಆಮೇಲೆ ? ದೇವರೇ ಬಲ್ಲ

ಎಂಬುದಾಗಿ ಶಿವರುದ್ರಪ್ಪನವರ ಕಣ್ಣಮುಂದೆ ಯಾವಾಗಲೂ ಎರಡು ಶಿಖರಗಳಿವೆ. ಕಣವಿ ಮತ್ತು ಶಿವರುದ್ರಪ್ಪನವರಿಗೆ ಯಾವಾಗಲು ಎದುರಿಸುವ ಎರಡು ಎಂದರೆ— ಒಂದು ಕಾವ್ಯಾನುಭವ ಮತ್ತು ಇನ್ನೊಂದು ಕಾವ್ಯದ ಅಭಿವ್ಯಕ್ತಿ ಮತ್ತು ಸಂವಹನ.

೫. ಇಬ್ಬರೂ ಸಹೃದಯರಿಗಾಗಿಯೇ ಕಾವ್ಯವನ್ನು ಬರೆಯುವ ಆದರ್ಶವನ್ನಿಟ್ಟು ಕೊಂಡಿದ್ದಾರೆ.

೬. ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ

ನಮಗೆ ಬೇಕಾದದ್ದು ದಾಹ ಪರಿಹಾರ ಎಂದು ಶಿವರುದ್ರಪ್ಪನವರು ಅಪೇಕ್ಷಿಸಿರುವಂತೆಯೇ, ಕಣವಿಯವರಿಗೂ

ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ
ಎಷ್ಟು ಸೆಲೆಯೊಡೆದರೂ ವಿಫಲ, ವಿಫಲ.

ಎಂಬ ಭಾವನೆಯ ಮೂಲಕ, ಹೊಸ ಹೊಸ ಕವನಗಳನ್ನು ಸೃಷ್ಟಿಸುವ ದಾಹ, ನೀರಡಿಕೆ, ಎಳೆತ ಇದೆ.

೭. ಇವರಿಬ್ಬರೂ ಕಾವ್ಯಕರ್ಮದಲ್ಲಿ ಚಿರಂತನ ದಾಹ ಉಳ್ಳ ಕವಿಗಳು. ಇನ್ನೊಬ್ಬರ ದಹನದಲ್ಲಿ ತೃಪ್ತಿಯನ್ನು ಕಾಣುವ ಕ್ರಾಂತಿ ಕವಿಗಳಲ್ಲ; ದಾಹವು ದೀಪ್ತಿಯಾಗಬೇಕು, ಮುತ್ತಿನ ಹಾರವಾಗಬೇಕು ಹಾಗೂ ಜ್ಯೋತಿರ್ಲಿಂಗವಾಗಬೇಕು ಎಂಬ ಮನೋಧರ್ಮದವರು.

ಇಬ್ಬರಲ್ಲಿ ಇರುವ ಅಂತರವನ್ನು ಹುಡುಕುವುದೇ ಆದರೆ, ಅದನ್ನು ಹೀಗೆ ಸಂಗ್ರಹಿಸಬಹುದು.

೧. ಶಿವರುದ್ರಪ್ಪನವರು ಸರಳ ಮತ್ತು ಪ್ರಸನ್ನವಾದ ಕಲ್ಲುಸಕ್ಕರೆಯಂಥ ಕಾವ್ಯವನ್ನು ರಚಿಸಿದ್ದಾರೆ.

ಕಣವಿಯವರ ಕಾವ್ಯ ಮಾಧುರ್ಯದ ಜೇನು !

೨. ಶಿವರುದ್ರಪ್ಪನವರ ಕಾವ್ಯ ಕುವೆಂಪು ಗಂಧಿ
ಕಣವಿಯವರ ಕಾವ್ಯ ಬೇಂದ್ರೆ ಗಂಧಿ
ಇಬ್ಬರದೂ ಕಾವ್ಯ ಕೆ.ಎಸ್. ನರಸಿಂಹಸ್ವಾಮಿಯವರೊಂದಿಗೆ ನಿಕಟ ಸಂಬಂಧಿ.

೩. "ಘನ ಗಂಭೀರ, ಛಿದ್ರ ವಿಚ್ಛಿದ್ರ ಜೀವನದ ಸ್ವರೂಪವನ್ನು ಜ್ಞಾನಿಗಳು ದೂರ ದರ್ಶನದ ಶಕ್ತಿಯಿಂದ ನೋಡಿ, ಅದನ್ನು ಒಂದು ಉತ್ಸವದಂತೆ ಪರಿವರ್ತಿಸಿ ಕೊಳ್ಳಬಲ್ಲ ಜಾಣರು" ಎಂದು ಇಮರ್ಸನ್ ಹೇಳಿದ ಮಾತು, ಕಣವಿಯವರ ಕಾವ್ಯಕ್ಕೆ ಸಮೀಪ.

"ನಮ್ಮ ಆಗು ಹೋಗುಗಳಿಗೆ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳುತ್ತ ಹೋಗುವುದೇ ನಾಗರಿಕತೆ. ವ್ಯವಸ್ಥೆ ಹೆಚ್ಚಿದಂತೆ ಅಡೆ ತಡೆ ಮತ್ತು ಅಪಾಯಗಳೂ ಹೆಚ್ಚುತ್ತವೆ. ಆದರೆ ಎಲ್ಲವುಗಳಿಗೂ ವ್ಯವಸ್ಥೆಯನ್ನು ಹಚ್ಚಲೇಬೇಕಲ್ಲ" ಎಂಬುದು ಮಾನಸ ಶಾಸ್ತ್ರಜ್ಞ ಯೂಂಗನ ಹಾದಿ. ಇದು ಶಿವರುದ್ರಪ್ಪನವರ ಮನೋವೃತ್ತಿಗೆ ಹೆಚ್ಚು ಪ್ರಿಯವೆಂದು ತೋರುತ್ತದೆ.

೪. ಕಣವಿಯವರ ಕಾವ್ಯದಲ್ಲಿ ಭಾವುಕತೆ ಮತ್ತು ವರ್ಣನೆ ಹೆಚ್ಚು.
ಶಿವರುದ್ರಪ್ಪನವರ ಕಾವ್ಯದಲ್ಲಿ ಬುದ್ಧಿ ಮತ್ತು ವೈಚಾರಿಕತೆ ಹೆಚ್ಚು.

೫. ಕಣವಿಯವರ ಜೀವನದಲ್ಲಿ ತಂದೆ ಸಕ್ಕರೆಪ್ಪ ಮತ್ತು ತಾಯಿ ಪಾರ್ವತವ್ವ ಇವರ ಮೂಲಕ ಸಿಹಿ ಮತ್ತು ಶಾಂತಿ ಪರಂಪರೆಯಿಂದ ಹರಿದು ಬಂದಿದೆ.
ಶಿವರುದ್ರಪ್ಪನವರ ಜೀವನದಲ್ಲಿ ತಂದೆ ಶಾಂತವೀರಪ್ಪ ಮತ್ತು ತಾಯಿ ವೀರಮ್ಮ ಇವರ ಮೂಲಕ ವೀರಪ್ಪ ಸಂಚಾರಿಯಾಗಿ ಬಂದರೂ ಶಾಂತಿಯಲ್ಲಿ ಸ್ಥಾಯಿಯನ್ನು ತಾಳುತ್ತದೆ.

ಇಬ್ಬರೂ ಏಕಾಂತ ಪ್ರಿಯರು ಮತ್ತು ಸಂಗೀತದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡವರಾಗಿದ್ದರಿಂದ, ಇಬ್ಬರಲ್ಲಿ ದೂಷಿತವಾಯು ಸಂಚಾರವಾಗಿಲ್ಲ ಎಂಬುದು ಕನ್ನಡದ ಭಾಗ್ಯ. ಇಬ್ಬರಲ್ಲಿ ಅನೇಕ ಕವಿಗಳು ಕನ್ನಡ, ಇಂಗ್ಲಿಷ, ಸಂಸ್ಕೃತ ಮತ್ತು ಇತರ ಭಾಷೆಗಳ ಸಾಮ್ಯವನ್ನು ಕಾಣಬಹುದು. ಅವುಗಳನ್ನೆಲ್ಲ ಇವರು ಪ್ರೇರಣೆಯಾಗಿ ಪಡೆದಿದ್ದಾರೆಯೇ ಹೊರತು, ಅವುಗಳ ಪ್ರಭಾವದಲ್ಲಿ ಮುಳುಗಿ ಹೋಗಿಲ್ಲ. ಪ್ರೇರಣೆ ಎಂಬುದು ಜೀವಂತ ಸೆಲೆ; ಪ್ರಭಾವ ಎಂಬುದು ಪರಾವಲಂಬಿ ಬಂವಳಿಕೆ.

"ಪ್ರಪಂಚ ನನ್ನನ್ನು ನನ್ನನ್ನಾಗಿಯೇ ಕಾಣಬೇಕೆಂದು ನನ್ನ ಅಪೇಕ್ಷೆ. ನನ್ನ ಸ್ಥಾನದಲ್ಲಿ ಮತ್ತೊಬ್ಬರನ್ನಿರಿಸಿ, ಅಥವಾ ಇನ್ನೊಬ್ಬರೊಡನೆ ನನ್ನನ್ನು ಹೋಲಿಸಿ ನೋಡಬಾರದು. ಏಕೆಂದರೆ ನನ್ನಲ್ಲಿರುವ ದೌರ್ಬಲ್ಯಗಳು ಅವು ಯಾವಾಗಲೂ

ನನ್ನವೇ. ನನ್ನಲ್ಲಿರುವ ಗುಣಗಳಂತೆಯೇ ದೋಷಗಳ ಬಗೆಗೂ, ಇತರರು ಆತ್ಮೀಯತೆ ತೋರಿಸಬೇಕು ಅಷ್ಟೇ" ಎಂದು ೧೯೬೪ರ ರಷ್ಟು ಪೂರ್ವದಲ್ಲಿ ಕಣವಿಯವರು ಸಹೃದಯದಲ್ಲಿ ತಮ್ಮ ಅಪೇಕ್ಷೆಯನ್ನು ಪ್ರಕಟಪಡಿಸಿದ್ದಾರೆ. ಅದೇ ಆತ್ಮೀಯತೆಯಿಂದ ಕಣವಿ ಮತ್ತು ಶಿವರುದ್ರಪ್ಪನವರನ್ನು, ಪ್ರತ್ಯೇಕ ಪ್ರತ್ಯೇಕವಾಗಿ ನೋಡಿ, ಅವರ ಜೀವನ ದರ್ಶನವನ್ನು ಅವರವರ ಕಾವ್ಯಗಳಲ್ಲಿ ಕಂಡು, ನನಗಾದ ಆನಂದವನ್ನು "ಶಿವರುದ್ರಪ್ಪ-ಕಣವಿ ಶಿವಶಕ್ತಿ" ಎಂಬ ನನ್ನ ಕವನದಲ್ಲಿ ಅಭಿವ್ಯಕ್ತ ಪಡಿಸಿರುವೆ. ಆ ಕವನದ ನಿವೇದನೆಯೊಂದಿಗೆ, ನನ್ನ ಉಪನ್ಯಾಸವನ್ನು ಮುಗಿಸುತ್ತಲಿರುವೆ. ಕವನ ಹೀಗಿದೆ :

**ಶಿವರುದ್ರಪ್ಪ-ಕಣವಿ, ಶಿವ-ಶಕ್ತಿ**

ಗೆಳೆ-ಸ್ನೇಹ ಎಳೆಎಳೆಯಾಗಿ
ಹಲಸಿನಾ ತೊಳೆ ತೊಳೆಯಾಗಿ
ಅಂಟು ಹಾಲಿನ ಕೆನೆಕೆನೆಯಾಗಿ
ತೂಗಿ ತೊನೆಯುತ್ತಲಿದೆ ಕನ್ನಡದ ಬಳ್ಳಿ !
ನೊರಜು ಬರಗೊಡದಂತೆ ಕಚ್ಚಿದಾ ಕಳ್ಳಿ.
ಹುಲ್ಲಿಗೂ ಕಲ್ಲಿಗೂ ಹೂ ಹೂವಿನ ಅಂದ
ನೂರಾರು ಮರಗಳಿಗೆ ಆದರದರ ಚೆಂದ.
ಹುಲ್ಲು ಮುಖ ಮಲ್ಲಿಗೂ, ಶಿಲ್ಪಿ ಕೈಕಲ್ಲಿಗೂ
ಬಂದ ಅಮೃತಕ್ಷಣಕೆ ಬಂಧ ಮೋಕ್ಷದ ಕಹಳೆ !
ಶಿವನ ಕೈ ಕಡಗ ಹಿಡಿದಿತ್ತು ಶಕ್ತಿಯು ಬಳೆ,
ನವಿಲು-ಕೋಗಿಲೆ ಸ್ಪರ್ಶ, ಕಣ್ಣು-ಕಿವಿ ಹರ್ಷ
ಚಿಗುರು ಚಿಗುರುತ್ತಲೇ ಇದೆ-ವರುಷ ವರುಷ
ಚಿನ್ನಗೊಳ್ಳುವ ಕ್ರಿಯೆಗೆ ಕಾರಣವು ಪರುಷ
ಕಾವ್ಯ ಕಡಲಿಗೆ ಬಿದ್ದ ಎಂಟೆದೆಯ ಪುರುಷ!
ಕೈಮಾಡಿ ಕರೆಯುತ್ತಿಹನು ಸಹೃದಯ ನಿಕಷ.
ನವೋದಯ-ನವ್ಯ-ಹಂಸಕ್ಷೀರನ್ಯಾಯ
ಕಣ್ಣು ಬಿಚ್ಚಿ ನಿಂತಿಹಳಿಗೋ, ತಡೆದು ಅನ್ಯಾಯ.

— ● —

# ವಿಮರ್ಶೆಯ ಪರಾಮರ್ಶೆ

---

**ಬಸವಲಿಂಗ ಸೊಪ್ಪಿಮಠ**

ಮೊದಲು ಭಾಷೆ, ಆಮೇಲೆ ಸಾಹಿತ್ಯ; ಹಾಗೆಯೇ ಮೊದಲು ಸಾಹಿತ್ಯ, ಆಮೇಲೆ ವಿಮರ್ಶೆ, ಬೇಂದ್ರೆ – ಕುವೆಂಪು ತಲೆಮಾರಿನ ಕನ್ನಡ ವಿಮರ್ಶೆ 'ರಸ ವಿಮರ್ಶೆ' ಯಾಗಿತ್ತು. ಕೃತಿಯೊಂದರ 'ಸಾಹಿತ್ಯಿಕ ಸೊಗಸುಗಾರಿಕೆ' ಪ್ರಧಾನ ಕಾಳಜಿಯಾಗಿತ್ತು. ಗೋಕಾಕ–ಅಡಿಗರ ಕಾಲದಿಂದೀಚೆಗೆ ಕನ್ನಡ ಸಾಹಿತ್ಯದೊಂದಿಗೆ ವಿಮರ್ಶೆಯೂ ಕವಲೊಡೆದು ರಸ ವಿಮರ್ಶೆ ಸ್ಥಾನದಲ್ಲಿ 'ಸಾಮಾಜಿಕ ವಿಮರ್ಶೆ' ಬಂತು. ಸಾಹಿತಿಯ ಅಭಿವ್ಯಕ್ತಿ ಚಾತುರ್ಯಕ್ಕಿಂತ ಅವನ ಬದುಕಿಗೆ, ಸಾಹಿತ್ಯ ಸೃಷ್ಟಿಗೆ ಕಾರಣವಾದ ಸಾಮಾಜಿಕ ಪರಿಸರ ಹೇಗೆ ಆತನ ಕೃತಿಯ ಹಿಂದಿನ 'ಧೋರಣೆ'ಯಾಗಿ ನಿಂತಿದೆ ಎಂಬುದು ಗಮನಾರ್ಹವಾಯಿತು. ಒಟ್ಟಿನಲ್ಲಿ, ಕಾವ್ಯದ 'ವಸ್ತು' ಕವಿತೆಯಲ್ಲಿ ಹೇಗೆ 'ಆಕಾರ' ಪಡೆದಿದೆ ಎಂಬುದರ ಪರಿಶೀಲನೆ ಕನ್ನಡ ನವೋದಯ ಕಾಲದ ವಿಮರ್ಶೆಯಾಗಿದ್ದರೆ, ಕವಿತೆಯ ಹಿಂದಿನ 'ಧೋರಣೆ' ಏನು ? ಅದು 'ಬಂಧ'ದಲ್ಲಿ ಹೇಗೆ ಸಂಗತವಾಗಿದೆ ? ಎಂಬುದು ನವ್ಯವಿಮರ್ಶೆಯ ತಾತ್ವಿಕ ಕಾಳಜಿಯಾಯ್ತು.

ಬೇಂದ್ರೆ–ಕುವೆಂಪು ಉತ್ತರಾಧಿಕಾರಿಗಳಾಗಿ ನವೋದಯದ ಏರುಗಾಲದಲ್ಲಿ ತಮ್ಮ ಕಾವ್ಯಜೀವನವನ್ನು ಆರಂಭಿಸಿದ ಶ್ರೀ ಚೆನ್ನವೀರ ಕಣವಿ ಹಾಗೂ ಶ್ರೀ ಜಿ. ಎಸ್. ಶಿವರುದ್ರಪ್ಪ ಅವರ ಕಾವ್ಯವನ್ನು ಮೇಲೆ ಹೇಳಿದ ಎರಡು ಘಟ್ಟದ ಅಂದರೆ ನವೋದಯ_ನವ್ಯ ಕಾಲದ ವಿಮರ್ಶಕರು ವಿಮರ್ಶಿಸುತ್ತ ಬಂದಿರು

ವಾಗಲೂ ಅವರ ಕಾವ್ಯದ ಬಗೆಗೆ ಪೂರ್ಣ ವಿಮರ್ಶೆ ಇನ್ನೂ ಬಂದಿಲ್ಲವೆಂದೇ ಹೇಳಬೇಕು. ಇಲ್ಲಿ ಪೂರ್ಣವಿಮರ್ಶೆ ಎಂದರೆ ನಿರ್ದಿಷ್ಟವೂ ನಿಷ್ಪಕ್ಷಪಾತವೂ ಆದ ವಿಮರ್ಶೆ ಎಂದರ್ಥ. ಈ ಮಾತನ್ನು ಯಾಕೆ ಎತ್ತಬೇಕಾಗಿದೆ ಎಂದರೆ, ಕಣವಿ ಮತ್ತು ಶಿವರುದ್ರಪ್ಪನವರ ರಚನೆಗಳು ಹೇಗೆ ಕಾವ್ಯ ? ಎಂಬ ವಸ್ತುನಿಷ್ಠ ವಿಮರ್ಶೆಗಿಂತ ಅವರು ನವೋದಯ ಕವಿಗಳೇ ? ನವ್ಯ ಕವಿಗಳೇ ? ಸಮನ್ವಯ ಕವಿಗಳೇ? ಎಂಬ ಚರ್ಚೆಯೇ ಅಧಿಕವಾಗಿದೆ. ವಾಸ್ತವವಾಗಿ ಈ ಚರ್ಚೆಯೇ ಅರ್ಥಹೀನವಾಗಿದ್ದು, ಯಾವುದೇ ಕವಿಯ ಪ್ರಾಮಾಣಿಕ ಕಾವ್ಯಕ್ಕೆ ಮಿತಿಯನ್ನು ಉಂಟುಮಾಡುವಂಥವಾಗಿವೆ.

'ದೀಪಧಾರಿ' ಸಂಕಲನದಿಂದ ಬದಲಾದ ತಮ್ಮ ಕಾವ್ಯಮಾರ್ಗದ ಕುರಿತು ಬರೆಯುತ್ತ ಶ್ರೀ ಕಣವಿ ಅವರು 'ಆಧುನಿಕ ಭಾವಗೀತೆ' ಮತ್ತು 'ನವ್ಯ' ಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ತಮ್ಮ ಕಾವ್ಯ 'ಸೇತುವೆ'ಯಾದೀತೆಂಬ ಮಾತನ್ನು ಆಡಿದರು[1]. ಅವರ ಈ ಮಾತು ಮುಂದಿನ ವಿಮರ್ಶಕರಿಂದ 'ಸಮನ್ವಯ' ಎಂಬ ಹಣೆಪಟ್ಟಿಯನ್ನು ತಂದೀತು ಎಂದು ಸ್ವತಃ ಕಣವಿಯವರೂ ಊಹಿಸಿರಲಾರರು. ಕಣವಿಯವರಂತೆ 'ಸಮನ್ವಯ' ಕವಿಗಳೆಂಬ ಲೇಬಲ್‌ಗೆ ಒಳಗಾದ ಡಾ. ಜಿ. ಎಸ್. ಶಿವರುದ್ರಪ್ಪನವರೇ ಒಂದು ಕಡೆಗೆ ಬರೆಯುತ್ತ, ಅಡಿಗರು ನವ್ಯವನ್ನು ರೂಢಿಸುವ ಮೊದಲೇ ಅದು ಬೇರೊಂದು ರೀತಿಯಲ್ಲಿ ಕಣವಿ ಮೊದಲಾದವರಲ್ಲಿ ಕಾಣಿಸಿಕೊಂಡಿತ್ತು ಎಂದಿದ್ದಾರೆ. ಅಡಿಗರು ಬರೆಯುವ ಸಂದರ್ಭದಲ್ಲಿ ಅವರಿಗಿಂತ ಬರೆಯುವ ಹಲವರು ಇದ್ದರು, ಅವರು ಇಂದು ಬರೆಯುತ್ತಿದ್ದಾರೆ– ಎನ್ನುವುದು, ಹೀಗೆ ಬೇರೆಯಾಗಿ ಬರೆಯುತ್ತಿರುವವರಲ್ಲಿ ಕಣವಿಯವರೂ ಮುಖ್ಯರಾದವರು ಎಂಬುದನ್ನು ಗಮನಿಸಬೇಕಾಗಿದೆ[2]. ಇವನ್ನು ಗಮನಿಸದ ಕನ್ನಡ ವಿಮರ್ಶೆ ನವೋದಯ ಮತ್ತು ನವ್ಯ ಅಂಶಗಳನ್ನು ಮೈಗೂಡಿಸಿಕೊಂಡು ಅಲ್ಲಿಯೂ ಮತ್ತು ಇಲ್ಲಿಯೂ ಸಲ್ಲುವವರು ಎಂಬರ್ಥದಲ್ಲಿ ಅವರನ್ನು ಸಮನ್ವಯ ಕವಿಗಳೆಂದು ಕರೆದರು. ಈ ಸಮನ್ವಯ ಮಾರ್ಗದ ಕಾವ್ಯ ತನ್ನಷ್ಟಕ್ಕೆ ತಾನು ಕಡಿಮೆ ದರ್ಜೆಯದೆಂದು ಭಾವಿಸಬೇಕಾದ ಕಾರಣವೇನೂ ಇಲ್ಲ ಎನ್ನುತ್ತಾರೆ. ಡಾ. ಗಿರಡ್ಡಿ ಗೋವಿಂದರಾಜರು; 'ಮೊದಲು ನವೋದಯ ಮಾರ್ಗದಲ್ಲಿ ಬರೆಯುತ್ತಿದ್ದ ಅನೇಕ ಕವಿಗಳು ನವ್ಯವಾಗಿ ಬದಲಾದಾಗ ಅವರ ಕಾವ್ಯದ ವಸ್ತು, ತಂತ್ರ, ಬದುಕಿನ ಬಗೆಗಿನ ಧೋರಣೆಗಳು ಹೆಚ್ಚು ಕಡಿಮೆ ಬದಲಾದವು. ಕಣವಿ ಮತ್ತು ಇನ್ನು ಕೆಲವರ ಕಾವ್ಯದಲ್ಲಿ ಹಾಗಾಗಲಿಲ್ಲ. ಅವರಲ್ಲಿ ಬದಲಾವಣೆ ಆಂಶಿಕವಾಗಿ; ಹಂತ ಹಂತವಾಗಿ ನಡೆಯಿತು. ಅಷ್ಟೇ ಅಲ್ಲ. ಕೊನೆಯ ಹಂತದಲ್ಲೂ ಕೂಡ ಅದು ತನ್ನ ಹಿಂದಿನ ಹಂತದ ಕೆಲವೊಂದು ಅಂಶಗಳನ್ನು ಬಿಟ್ಟುಕೊಡಲಿಲ್ಲ'[3]. ಇವರ

ಅಭಿಪ್ರಾಯದಂತೆ ಸಮನ್ವಯ ಕಾವ್ಯ ಅಂತೆಯೇ ಕಣವಿ ಶಿವರುದ್ರಪ್ಪ ಮೊದಲಾದವರ ಕಾವ್ಯ ನವ್ಯ ಸಂದರ್ಭದಲ್ಲೂ ಮುಂದುವರಿಂದ ವಿಶಿಷ್ಟ ನವೋದಯ ಕಾವ್ಯ. ಈ ಅಭಿಪ್ರಾಯವನ್ನು ಬೆಂಬಲಿಸುವ ವಿಮರ್ಶಕರಿರುವ ಹಾಗೆ 'ಸಮನ್ವಯ' ಮಾತನ್ನೇ ಒಪ್ಪದ (ಸ್ವತಃ ಕಣವಿ ಶಿವರುದ್ರಪ್ಪ ಅವರೇ ಒಪ್ಪಿಲ್ಲ) ಕೆ. ವಿ. ನಾರಾಯಣ ಮೊದಲಾದ ವಿಮರ್ಶಕರಿದ್ದಾರೆ. ಜಿ. ಎಸ್. ಶಿವರುದ್ರಪ್ಪನವರ 'ಸಮಗ್ರ ಕಾವ್ಯ'ಕ್ಕೆ ಬರೆದ ಮುನ್ನುಡಿಯಲ್ಲಿ ಕೆ. ವಿ. ನಾರಾಯಣ ಅವರು ಹೀಗೆ ನುಡಿಯುತ್ತಾರೆ: "ನವೋದಯ ಹಾಗೂ ನವ್ಯ ಕಾವ್ಯಮಾರ್ಗಗಳ ಲಕ್ಷಣಗಳನ್ನು ಒಗ್ಗೂಡಿಸಲು ಯತ್ನಿಸಿದವರು ಎಂಬ ಸರಳ ಅರ್ಥದಲ್ಲಿ 'ಸಮನ್ವಯ' ಕವಿ ಎಂಬ ಮಾತು ಚಾಲ್ತಿ ಪಡೆದಿದೆಯಷ್ಟೇ .... ಪಾರಿಭಾಷಿಕ ಪದವಾಗಿ 'ಸಮನ್ವಯ' ಎನ್ನುವುದು ಹೇಗೂ ಅರ್ಥವಿಸಬಹುದಾದದ್ದು; ಅಲ್ಲಿ ಇಲ್ಲಿ ಎಲ್ಲೂ ಸಲ್ಲದವರು ಎಂದು ಮೊದಲಾಗಿ ಅಲ್ಲಷ್ಟು ಇಲ್ಲಷ್ಟು ಎಂದು ಹೊಂದಾಣಿಕೆ ಮಾಡಿದವರು ಎಂದು ಕೂಡ ಹೇಳಲು ಸಾಧ್ಯವಿದೆ. ನವ್ಯ ಮಾರ್ಗವನ್ನು ವ್ಯಾಖ್ಯಾನಿಸಿದವರ ಚೌಕಟ್ಟಿಗೆ ಸಿಲುಕದ ಇತರ ಕವಿಗಳೆಲ್ಲ 'ಸಮನ್ವಯ' ಎನ್ನುವ ತಲೆಪಟ್ಟಿ ಪಡೆದರೆಂದು ತೋರುತ್ತದೆ. ಹೇಗೇ ಇರಲಿ, ಸದ್ಯಕ್ಕಂತೂ ಇದೊಂದು ನಿರುಪಯುಕ್ತ ಚೌಕಟ್ಟು ಎಂದೆ ನನ್ನ ಭಾವನೆ. ಕಾರಣವಿಷ್ಟೆ; ನವ್ಯ ಕಾವ್ಯಮಾರ್ಗದ ವೈವಿಧ್ಯತೆಗಳನ್ನು ಗುರುತಿಸಲು ನವ್ಯ ವಿಮರ್ಶೆ ಹಿಂಜರಿಯಿತಾಗಿ ಆ ವಿಮರ್ಶಾ ಮಾರ್ಗದ ವರ್ಗೀಕರಣಗಳು ಕಾವ್ಯ ಸಂದರ್ಭವನ್ನು ಏಕಘನಾಕೃತಿಯಲ್ಲಿ ಕಂಡವರ ಪರಿಣಾಮವಾಗಿ ಹುಟ್ಟಿದವು. ಇದು ವಸ್ತುಸ್ಥಿತಿಯ ಸರಿಯಾದ ಗ್ರಹಿಕೆಯಲ್ಲವೆಂಬುದಂತೂ ಖಚಿತ[4], ಎಂದಿದ್ದಾರೆ. ಗಿರಡ್ಡಿ ಗೋವಿಂದರಾಜರು ನವ್ಯದಲ್ಲೂ ಮುಂದುವರಿದ ನವೋದಯ ಅಂಶಗಳನ್ನು 'ಸಮನ್ವಯ' ಎಂದು ಗುರುತಿಸಿದರೆ, ಕೆ. ವಿ. ನಾರಾಯಣ ಅವರು ಅದಕ್ಕೆ ವಿರುದ್ಧವಾಗಿ ಅದನ್ನು 'ನವ್ಯ ಕಾವ್ಯಮಾರ್ಗದ ವೈವಿಧ್ಯತೆ' ಎಂದು ತಿಳಿಸುತ್ತಾರೆ. ವಾಸ್ತವವಾಗಿ, ಕಣವಿ, ಶಿವರುದ್ರಪ್ಪನವರು ಯಾವ ಪಂಥದ ಕಾವ್ಯ ಎಂಬ ಚರ್ಚೆಯೇ ಅನವಶ್ಯಕವಾಗಿದ್ದು. ಅದು ಕಾವ್ಯ ಹೌದೋ ಅಲ್ಲವೋ ಎನ್ನುವುದು ಮುಖ್ಯ. ಕನ್ನಡ ಸಹೃದಯರು ಕಂಡುಂಡಂತೆ ಕಣವಿ-ಶಿವರುದ್ರಪ್ಪನವರದು ಕನ್ನಡ ಜಾಯಮಾನದ ಅಪ್ಪಟ ಕಾವ್ಯ ಎಂಬುದು ಸ್ಪಷ್ಟ.

೨

ಕಣವಿಯವರ ಮನೋಧರ್ಮ ಪ್ರಶಾಂತಿಯದಲ್ಲದೆ ರಭಸದ್ದಲ್ಲ ಎನ್ನುತ್ತಾರೆ ಗೋಪಾಲಕೃಷ್ಣ ಅಡಿಗರು[5]. ಕಣವಿ – ಕಾವ್ಯದಲ್ಲಿ 'ನೈಸರ್ಗಿಕ ಗಮನ'ವನ್ನು ಗುರುತಿಸುವ ಶಂಕರ ಮೊಕಾಶಿ ಪುಣೇಕರ ಅವರು ಅವರನ್ನು ಬದಲಾದ ನವ್ಯದ

ಬೇಸರದ ಮಾರ್ಗದಲ್ಲೂ ಮುಂದುವರಿದ 'ನಡಿಗೆಯ ಕುದುರೆ' ಎಂದಿದ್ದಾರೆ[6]. ಕಣವಿಯವರ ಕಾವ್ಯ ನಿಸರ್ಗಮುಖೀ ಎಂಬುದನ್ನು, ನೈಸರ್ಗಿಕ ಗತಿ (ಭಾಷೆ ಲಯಗಳ ಸಹಜತೆ) ಅವರ ಕಾವ್ಯಕ್ಕಿದೆ ಎಂಬುದನ್ನು ಇದು ಸೂಚಿಸುತ್ತದೆ.

ಕಣವಿಯವರು ಪ್ರಮುಖವಾಗಿ ಸಾನೆಟ್ಟಿನ ಕವಿ. ಅವರಷ್ಟು ವಿಪುಲ ಪ್ರಮಾಣ ಸತ್ವಶಾಲಿಯಾಗಿ ಸಾನೆಟ್ಟುಗಳನ್ನು ಬರೆದವರು ಕನ್ನಡದಲ್ಲಿ ವಿರಳ. ಸಾನೆಟ್ಟಿನ ಮೇಲೆ ಕಣವಿಯವರಿಗೆ ಇರುವ ವ್ಯಾಮೋಹದ ಕುರಿತು ದೀರ್ಘವಾಗಿ ಚರ್ಚಿಸಿರುವ ಶಾಂತಿನಾಥ ದೇಸಾಯಿಯವರು, ಸಾನೆಟ್ಟು, ಕಣವಿಯವರ ಮನೋಧರ್ಮಕ್ಕೆ ತಕ್ಕುದಾದ ಕಾವ್ಯ ಪ್ರಕಾರ ಎಂದಿದ್ದಾರೆ. 'ಭಾವನೆ ಹಾಗೂ ಚಿಂತನೆಗಳ ಸಮತೋಲನ'ವನ್ನು ಕಣವಿಯವರ ಸಾನೆಟ್ಟುಗಳು ಸಶಕ್ತವಾಗಿ ಕಾಪಾಡಿಕೊಂಡಿರುವುದನ್ನು ಶ್ರೀ ದೇಸಾಯಿಯವರು ಸರಿಯಾಗಿಯೇ ಗುರುತಿಸಿದ್ದಾರೆ[7].

ಕಣವಿಯವರ ಕಾವ್ಯದ ಮೇಲೆ ಬಂದ ವಿಮರ್ಶೆಯಲ್ಲಿ ಕೀರ್ತಿನಾಥ ಕುರ್ತುಕೋಟಿ, ಡಿ. ಆರ್. ನಾಗರಾಜ, ಜಿ. ಎಸ್. ಆಮೂರ ಅವರ ಬರಹಗಳು ಮುಖ್ಯವಾಗಿದ್ದು ಅಭ್ಯಾಸಯೋಗ್ಯವಾಗಿವೆ.

ಕುರ್ತುಕೋಟಿಯವರು ಕಣವಿಯವರ ಕಾವ್ಯದಲ್ಲಿ ಎರಡು ಧಾರೆಗಳನ್ನು ಗುರುತಿಸುತ್ತಾರೆ— "ಕವಿಯ ವ್ಯಕ್ತಿತ್ವ ಬಹಿರ್ಮುಖವಾಗಿ ಬಾಹ್ಯಲೋಕದ ಘಟನೆಗಳೊಂದಿಗೆ ಸ್ಪಂದಿಸುವಾಗ ಹುಟ್ಟುವ ಕಾವ್ಯ ಒಂದು ಬಗೆಯಾದರೆ, ಕವಿಯ ಅಂತರಂಗದ ಬೆಳವಣಿಗೆಯನ್ನು ಪ್ರತಿಫಲಿಸುವ ಕಾವ್ಯ ಇನ್ನೊಂದು ಬಗೆಯಾಗಿದೆ[8]" ಎನ್ನುತ್ತಾರೆ. ಮುಂದುವರಿದು ಕಣವಿಯವರ ಬಹಿರ್ಮುಖೀ ಕಾವ್ಯವನ್ನು 'ತಟಸ್ಥ ಕಾವ್ಯ'ವೆಂದೂ 'ಪ್ರಾಸಂಗಿಕ ಕಾವ್ಯ' ವೆಂದೂ ಅವರು ಕರೆದಿದ್ದಾರೆ. ಈ ಜಾತಿಯ ಕಾವ್ಯ 'ಒಂದು ವಿಶಿಷ್ಟ ಶೈಲಿಯನ್ನು, ವಿನಯವೇ ಸ್ಥಾಯಿಯಾಗಿ ಉಳ್ಳ ಒಂದು ಭಾವ ಸಂದೇಹವನ್ನು, ಗುಣಗ್ರಾಹಕ ಪ್ರಜ್ಞೆ'ಯನ್ನು ಮೊದಲಿನಿಂದಲೂ ರೂಢಿಸಿಕೊಂಡು ಬಂದಿದೆ ಎನ್ನುತ್ತಾರೆ[9]. ಕುರ್ತುಕೋಟಿಯವರು ಕಣವಿಯವರಲ್ಲಿ ಗುರುತಿಸುವ ಈ ತಟಸ್ಥ ಇಲ್ಲವೆ ಪ್ರಾಸಂಗಿಕ ಕಾವ್ಯವನ್ನು ಅವರ ಆರಂಭಿಕ ರಚನೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತಾಡಿದಂತಿದೆ. ಅವರ ಅಂತರ್ಮುಖೀ ಕಾವ್ಯವನ್ನು 'ಎರಡು ದಡ' ಸಂಕಲನಗಳ ನಂತರದಿಂದ ಗುರುತಿಸುವುದರಿಂದ ಈ ಮಾತು.

'ಯಾವ ಅನುಭವವನ್ನೂ ಜೀವಂತವಾಗಿ ಮಾತಾಡಿಸುವ ಶಕ್ತಿ ಕಣವಿಯವರ ಕಾವ್ಯಕ್ಕಿದೆ' ಎನ್ನುವ ಕುರ್ತುಕೋಟಿಯವರು ಕಣವಿಯವರ ಕಾವ್ಯಲೋಕದ ನಿತ್ಯವಸ್ತುಗಳು 'ನಿಸರ್ಗದ ಚೆಲುವು, ದೈನಂದಿನ ಜೀವನದ ಮೂಡಿ ಮಸುಳುವ ಚಿತ್ರ

ಲೋಕ, ವಿಭೂತಿ ಪುರುಷರ ಜೀವನದ ವಿಸ್ಮಯ, ಅಲ್ಲಲ್ಲಿ ಅಷ್ಟಿಷ್ಟು ರಾಜಕೀಯ ದುಷ್ಟತನ'ಎಂಬುದಾಗಿ ದಶಕಗಳ ಹಿಂದಿನ ಅವರ ಕಾವ್ಯವನ್ನು ಲಕ್ಷಿಸಿ ಹೇಳಿದ್ದಾರೆ[10].

ನವೋದಯ–ನವ್ಯ ಎರಡು ಸಂದರ್ಭಗಳಲ್ಲೂ ಬದಲಾಗದ ಕಣವಿ-ಗುಣವನ್ನು ಕುರ್ತಕೋಟಿಯವರು ಹೀಗೆ ವಿವರಿಸುತ್ತಾರೆ. "ಮುಖ್ಯವಾಗಿ ಕಣವಿಯವರ ಕಾವ್ಯ ಆತ್ಮಚರಿತ್ರೆಯಿಂದ ಕೂಡಿದ್ದು, ಅಂದರೆ ಸ್ವಾನುಭೂತಿಯೇ ಅದರ ಜೀವಾಳವಾಗಿದೆ. ಎರಡನೆಯದಾಗಿ ಅವರ ಕಾವ್ಯ ಶುದ್ಧವಾಗಿ ವರ್ಣನಾತ್ಮಕವಾದದ್ದು[11]". ಇಲ್ಲಿ 'ಆತ್ಮಚರಿತ್ರೆ', 'ಸ್ವಾನುಭೂತಿ', 'ವರ್ಣನಾತ್ಮಕ' ಪದಗಳು ಗಮನಿಸತಕ್ಕುವಾಗಿವೆ. 'ಆತ್ಮಚರಿತ್ರೆ' ಮತ್ತು 'ಸ್ವಾನುಭೂತಿ' ಪದಗಳು ಕಣವಿಯವರ ಅನುಭವ ನಿಷ್ಠತೆಯನ್ನು ಹೇಳುತ್ತಿದ್ದರೆ, ಅದೇ ಕಾರಣವಾಗಿ ಅಂದರೆ ಅನುಭವಗಳ ಸರಳತೆ ಹಾಗೂ ಆತ್ಮೀಯತೆಗಳೇ ಕಾರಣವಾಗಿ 'ವರ್ಣನಾತ್ಮಕತೆ' ಕಾಣಿಸಿಕೊಂಡಿತೆಂದು ಕುರ್ತಕೋಟಿಯವರೇ ವಿಶ್ಲೇಷಿಸುತ್ತಾರೆ. ಅವರೇ ಹೇಳುವಂತೆ ನವ್ಯತೆ ಎಂಬುದು ಕಣವಿಯವರಲ್ಲಿ 'ಆಂತರಿಕ ಅವಶ್ಯಕತೆಯಾಗಿ ಬಂದಿರದೆ ಹೊರಗಿನ ಪ್ರಭಾವವಾಗಿ ಬಿದ್ದಿದೆ'. ಅಂದರೆ ಧೋರಣೆಯಲ್ಲಿ ಸ್ವಾನುಭೂತಿ, ಸ್ವಂತಿಕೆಯನ್ನು ಅನುಸರಿಸಿದ ಕಣವಿಯವರು ಬಂಧದಲ್ಲಿ ಮಾತ್ರ ನವ್ಯವನ್ನು ಸ್ವೀಕರಿಸಿದರೆಂದು ಕುರ್ತಕೋಟಿ ಅರ್ಥೈಸುತ್ತಾರೆ. ಸರಳಗೊಳಿಸಿ ಹೇಳುವುದಾದರೆ ಕಣವಿಯವರ ಕಾವ್ಯಧೋರಣೆ ನವೋದಯ ಮೂಲದ್ದು,ಬದಲಾದ ಆಕೃತಿಯ ನವ್ಯ ಸಂದರ್ಭದಲ್ಲೂ ನವೋದಯ ಮೂಲದ್ದು. ಕಣವಿಯವರ ಕಾವ್ಯ 'ಶುದ್ಧವಾಗಿ ವರ್ಣನಾತ್ಮಕವಾದದ್ದು' ಎಂಬ ಕುರ್ತಕೋಟಿಯವರ ವಿಚಾರ ಇದನ್ನೇ ಹೇಳುತ್ತದೆ. 'ವರ್ಣನಾತ್ಮಕತೆ' ಎಂಬುದು ಉತ್ಸಾಹ ಮೂಲದಿಂದ ಹೊರಡುವ ಚೆಲುವಿನ ಅಭಿವ್ಯಕ್ತಿ. ಅಂತೆಯೇ ಕಣವಿಯವರು ನಿಸರ್ಗವನ್ನು ಆಯ್ದುಕೊಳ್ಳುವಾಗ, ವ್ಯಕ್ತಿಗತ ಹಾಗೂ ಸಾಮಾಜಿಕ ಸಂವೇದನೆಗಳಿಗೆ ನಿಸರ್ಗವನ್ನೇ ಹಿನ್ನೆಲೆಯಾಗಿ, ಭೂಮಿಕೆಯಾಗಿ, ಪ್ರತಿಮೆಯಾಗಿ ಬಳಸುವಾಗಲೆಲ್ಲ ಉತ್ಸಾಹದಿಂದ ತಮ್ಮ ಪ್ರತಿಭೆಯನ್ನು ವರ್ಣನೆಗೆ ದುಡಿಸುತ್ತಾರೆ. ವರ್ಣನಾತ್ಮಕತೆಗೆ ಉತ್ಸಾಹವೊಂದೇ ಸಾಲದು. ನಿಸರ್ಗವೇ ಇರಲಿ ಸಮಾಜವೇ ಇರಲಿ, ಆ ಕುರಿತಾದ ಪ್ರೀತಿ ಅಂತಃಕರಣ ಬೇಕು. ಅದು ಇರುವುದರಿಂದಲೇ, ಕುರ್ತಕೋಟಿಯವರು ವ್ಯಾಖ್ಯಾನಿಸುವಂತೆ, ಕಣವಿಯವರ ಕಾವ್ಯ 'ಪ್ರೀತಿ–ಅಂತಃಕರಣಗಳ ಮೂಲಕ ಭಾಷೆಗೆ ಮೂಡಿದ ರೋಮಾಂಚ'ವೇ ಆಗಿದೆ[12]. ಅಂತಃಕರುಣೆ ಮತ್ತು ಆ ಮೂಲಕ ಕಾವ್ಯದಲ್ಲಿ ವರ್ಣನೆಯನ್ನು ಉಳಿಸಿಕೊಂಡೂ ಕವಿ ಕಣವಿಯವರು ಸಾಧಿಸಿದ ಈಚಿನ ಕಾವ್ಯ ಯಶಸ್ಸನ್ನು ಅದೇ ಕುರ್ತಕೋಟಿಯವರು ಹೀಗೆ ಗುರುತಿಸಿದ್ದಾರೆ. "ಮೊದಲು ವರ್ಣನೆಯಾಗಿದ್ದದ್ದು ಈಗ ಜೀವಂತ ಚಿತ್ರ ಪ್ರತಿಮೆಗಳಾಗಿ ಕಾವ್ಯದಾಚೆಯ ಅರ್ಥವಿಸ್ತಾರವನ್ನು ಸೂಚಿಸುವಷ್ಟು ಸಮರ್ಥವಾಗಿದೆ".

ಹೀಗೆ ವರ್ಣನೆಯಿಂದ ಅರ್ಥವಿಸ್ತಾರದತ್ತ ಸಾಗಿದ ಕಣವಿ-ಕಾವ್ಯದ ತಾತ್ವಿಕ ಆಯಾಮುಗಳನ್ನು ಗುರುತಿಸಿ ಹೇಳಿದ ವಿಮರ್ಶಕರಲ್ಲಿ ಡಾ. ಡಿ. ಆರ್. ನಾಗರಾಜ ಮುಖ್ಯರಾಗಿದ್ದಾರೆ. ಅವರು ಅಭಿಪ್ರಾಯ ಪಡುವಂತೆ, ನವೋದಯ ಚಳುವಳಿಯ ಫಲವಾದ 'ಆದರ್ಶವಾದ' ಮತ್ತು 'ಭಾವಗೀತಾತ್ಮಕತೆ' ಎರಡನ್ನೂ ಕಣವಿಯುವರು ತಮ್ಮ ಕಾವ್ಯದಲ್ಲಿ ಸಾಧಿಸಿದ್ದಾರೆ. ನವೋದಯ ಲಕ್ಷಣವಾದ 'ಆಶಾವಾದ'ವು ಕಣವಿಯುವರ ಕಾವ್ಯದಲ್ಲಿ 'ಭಾವಗೀತಾತ್ಮಕ'ವಾಗಿ ಭಾಷಾಂತರಗೊಂಡಿದೆ ಎನ್ನುವ ನಾಗರಾಜ್ ಅವರು, ಈ ಆಶಾವಾದ, ಆದರ್ಶವಾದಗಳೇ ನವ್ಯಸಂದರ್ಭದಲ್ಲಿ 'ವಾಸ್ತವಿಕ ಪ್ರಜ್ಞೆ'ಯಾಗಿ ಬದಲಾಗಿ ಕಣವಿಯುವರಲ್ಲಿ 'ಸಮನ್ವಯ ಕಾವ್ಯ'ವೆನಿಸಿತು ಎನ್ನುತ್ತಾರೆ[13].

"ಅಡಿಗರು ತಮ್ಮೆಲ್ಲ ಶಕ್ತಿಗಳನ್ನು ಸೂರೆಗೈದು ತೀವ್ರ ಕಾವ್ಯ ರಚಿಸುತ್ತಿದ್ದ ಸಂದರ್ಭದಲ್ಲೇ ಅದಕ್ಕಿಂತ ಸಂಪೂರ್ಣ ಭಿನ್ನವಾದ ಕಾವ್ಯವನ್ನು ರಚಿಸಿದ ಕವಿಗಳಲ್ಲಿ ಕಣವಿಯುವರು ಮುಖ್ಯರು"[13] ಎಂಬುದನ್ನು ಒಪ್ಪುವ ಡಿ. ಆರ್. ನಾಗರಾಜ್ ಅವರು ಕಣವಿಯುವರ ಕಾವ್ಯಮಾರ್ಗವನ್ನು 'ಭಾವಗೀತಾತ್ಮಕ ವಾಸ್ತವತೆ' ಎಂದು ಹೆಸರಿಸುತ್ತಾರೆ[14]. ಅವರೇ ವಿವರಿಸುವಂತೆ ನವ್ಯ ಸಂದರ್ಭದಲ್ಲಿ ಕಣವಿಯುವರ ಆಳವಾಗಿ ಬೆಳೆಸಿಕೊಂಡ ಫಲವಾಗಿ ಮೂಡಿದ್ದು 'ವಾಸ್ತವಿಕ ಪ್ರಜ್ಞೆ', ನವೋದಯ ಸಂವೇದನೆಗಳಲ್ಲಿ ಅವರು ಉಳಿಸಿಕೊಂಡದ್ದು 'ಭಾವಗೀತಾತ್ಮಕತೆ;' ಇವೆರಡರ ಸಂಯೋಗವೇ ಅವರ ಕಾವ್ಯಮಾರ್ಗ 'ಭಾವಗೀತಾತ್ಮಕ ವಾಸ್ತವತೆ' ಎನ್ನಬಹುದು. ಈ ಮಾರ್ಗವಲ್ಲಿ 'ಮಾನವತಾವಾದ'ದ ತಾತ್ವಿಕ ಪ್ರಭಾವದ ಜೊತೆಗೆ 'ಪ್ರಜಾ ಸತ್ತಾತ್ಮಕ ಮೌಲ್ಯಗಳು' ಉನ್ನತಾರ್ಥದಲ್ಲಿ ಸಮಾವೇಶವಾಗಿರುವುವೆಂದು ನಾಗರಾಜ್ ಹೇಳುತ್ತಾರೆ.

ಹೀಗೆ ನವೋದಯ ಕಾಲದ ಉದಾರವಾದ ಮತ್ತು ಭಾವಗೀತಾತ್ಮಕತೆಗೆ ನವ್ಯಕಾಲದ ವಾಸ್ತವತೆಯ ಸ್ಪರ್ಶ ದೊರೆತು ಕಣವಿ ಅವರ ಕಾವ್ಯಮಾರ್ಗ— ಭಾವಗೀತಾತ್ಮಕ ವಾಸ್ತವತೆ– ಸಿದ್ಧಿಸಿತು ಎನ್ನುವ ನಾಗರಾಜ್ ಅವರು, ಕಣವಿಯುವರಲ್ಲಿ ಈ ಸಿದ್ಧಿಯನ್ನು ಅವರ 'ಜೀವಧ್ವನಿ' ಸಂಕಲನದಲ್ಲಿ ಗುರುತಿಸುತ್ತಾರೆ. ವರ್ಣನೆಯ ವಿವರಶೀಲತೆ ಇಲ್ಲದೆಯೂ ಸೂಕ್ಷ್ಮವಾಗುವ, ಸ್ಪಷ್ಟವಾಗುವ ಪ್ರಯತ್ನ ಈ ಸಂಕಲನದ ಕವಿತೆಗಳಲ್ಲಿ, ವಿಶೇಷವಾಗಿ ಸಾನೆಟ್‌ಗಳಲ್ಲಿ ಇರುವುದನ್ನು ಅವರು ಎತ್ತಿ ಹೇಳುತ್ತಾರೆ.[17]

'ಸಾನೆಟ್ಟುಗಳು ಯಶಸ್ಸುಗಳಿಸುವುದು ವಸ್ತು ಮತ್ತು ವಿವರಗಳೆರಡರ ನಡುವಣ ಅಖಂಡ ಸಂಬಂಧದಿಂದ' ಎನ್ನುವ ನಾಗರಾಜ್ ಅವರು, ಕಣವಿಯುವರಲ್ಲಿ

ಈ ಅಖಂಡತ್ವ ಈಚಿಗೆ ಪ್ರಕಟವಾಗುತ್ತಿರುವುದಾಗಿ ಹೇಳುತ್ತಾರೆ. 'ಜೀವ ಧ್ವನಿ'ಯಲ್ಲಿ ಅದಕ್ಕೆ ಸಾಕ್ಷಿಯೊದಗಿಸುತ್ತಾರೆ. 'ಇಲ್ಲಿ ವಿವರವೆಂಬುದು ವಸ್ತುವಿನ ಶರೀರವಲ್ಲಿ ಅಂತರಂಗೀಕರಿಸಲ್ಪಟ್ಟಿದೆ' ಎನ್ನುತ್ತಾರೆ.[18]

ಕಣವಿಯವರಲ್ಲಿ ಕಾಣಿಸುವ ಭಾಷೆಯ ಪ್ರಬುದ್ಧ ಭಾವಗೀತಾತ್ಮಕತೆಗೆ ನವೋದಯ ಕಾಲದ ಉದಾರವಾದದ ಜೊತೆಗೆ 'ಪ್ರಕೃತಿ'ಯೂ ಒಂದು ಕಾರಣ ವೆನ್ನುತ್ತಾರೆ ಡಿ. ಆರ್. ನಾಗರಾಜ್. ಕಣವಿಯವರಿಗೆ ಕನ್ನಡ ನವೋದಯದ ಜೊತೆಗೆ ಇರುವ ಆಳವಾದ ಸಂಬಂಧಕ್ಕೆ 'ಪ್ರಕೃತಿ'ಯೂ ಕಾರಣ ಎನ್ನುವ ಅವರು– ಪ್ರಕೃತಿ ಎಂದರೆ ಬರೀ ಕಲ್ಲು, ಮಣ್ಣು, ಹೊಳೆಗಳ ಚಿತ್ರಣವಲ್ಲ. ಅಲ್ಲಿ ಇದು ಬದುಕಿನ, ಚರಿತ್ರೆಯ ಪ್ರತಿಮೆ ಕೂಡಾ ಹೌದು. ಕಣವಿಯವರ ಸೂಕ್ಷ್ಮ ಅನುಭವಗಳೆಲ್ಲ ಪ್ರಕೃತಿಗೆ ಭಾಷಾಂತರವಾಗುತ್ತವೆ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಕಣವಿಯವರ ಸಂವೇದನೆಗಳು ಪ್ರಕೃತಿಯೊಂದಿಗೆ ಮುಖಾಮುಖಿ ಯಾಗುವುದನ್ನು, ಸಂವಹನಗೊಳ್ಳುವುದನ್ನು ನಾಗರಾಜ್ ಸರಿಯಾಗಿಯೇ ಗುರುತಿಸಿದ್ದಾರೆ.

ಕಣವಿಯವರ ಸಮಗ್ರ ಕಾವ್ಯ 'ಹೊಂಬೆಳಕು'ವಿಗೆ ಮೌಲಿಕ ಪ್ರಸ್ತಾವನೆ ಬರೆದಿರುವ ಕನ್ನಡದ ಹಿರಿಯ ವಿಮರ್ಶಕರಾದ ಡಾ. ಜಿ. ಎಸ್. ಆಮೂರ ಅವರು 'ಕಣವಿಯವರ ಕಾವ್ಯ ಜೀವನದ ಎದ್ದು ಕಾಣುವ ವೈಶಿಷ್ಟ್ಯವೆಂದರೆ, ಎಲ್ಲ ಸಮ ಕಾಲೀನ ಸಾಹಿತ್ಯ ಚಳುವಳಿಗೆ ಪ್ರತಿಸ್ಪಂದಿಸಿಯೂ ಯಾವುದಕ್ಕೂ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಳ್ಳದೆ ಇರುವುದು ಎಂದಿದ್ದಾರೆ[19] ಅಂತೆಯೇ ಕಣವಿ ಅವರನ್ನು 'ಸಮನ್ವಯ' ಕವಿಗಳೆಂದು ಗುರುತಿಸುವಲ್ಲಿ ಯಾವ ಔಚಿತ್ಯವೂ ಇಲ್ಲ ಮಾತ್ರವಲ್ಲ, ಇಂಥ ಹೇಳಿಕೆಗಳು ತಪ್ಪು ತಿಳುವಳಿಕೆಗೆ ಕಾರಣವಾಗಬಲ್ಲವು ಎಂದಿದ್ದಾರೆ[20].

ತಮ್ಮ ಕಾವ್ಯ ಜೀವನದ ಉದ್ದಕ್ಕೂ ಆಯ್ಕೆಯ ವಿಷಯದಲ್ಲಿ ಕಣವಿಯವರು ತೋರಿರುವ 'ಧೈರ್ಯ ಸ್ವಾತಂತ್ರ್ಯ, ಮತ್ತು ಪ್ರಾಮಾಣಿಕತೆ'ಗಳು ಅವರನ್ನು ಬೇಂದ್ರೆ ಅಥವಾ ಅಡಿಗರಂತೆ ಮಾರ್ಗಪ್ರವರ್ತಕ ಕವಿಯಾಗದೆಯೂ ತಮ್ಮ 'ಅನನ್ಯತೆ ಮತ್ತು ವೈಶಿಷ್ಟ್ಯತೆ'ಯನ್ನು ಕಾಯ್ದುಕೊಂಡು ಬರಲು ಮುಖ್ಯ ಕಾರಣವಾಯಿತೆಂದೂ, ಅನ್ಯ ಪ್ರಭಾವಗಳನ್ನು ಅರಗಿಸಿಕೊಂಡೂ ತಮ್ಮ ಸ್ವಂತದ ಪ್ರತಿಭೆಯನ್ನು ಮೆರೆ ಯಲು ಸಾಧ್ಯವಾಯಿತೆಂದೂ ಡಾ. ಆಮೂರ್ ಹೇಳುತ್ತಾರೆ.

ಕಣವಿಯವರ ಕಾವ್ಯ ಜೀವನದ ವಿಕಾಸ ಕ್ರಮ ಒಂದು 'ಸುಯೋಜಿತವಾದ ಬೆಳವಣಿಗೆ' ಎನ್ನುವ ಡಾ. ಆಮೂರ ಅವರು, ಕಣವಿಯವರ ಮೊದಲ ಹಂತದ

ರಚನೆಗಳ ಆಶಯುವನ್ನು 'ಸಾಂಕಲ್ಪಿಕ' (Programmatic) ಎಂದು ಕರೆದಿದ್ದಾರೆ[21]. ಮತ್ತು ಈ ಸಾಂಕಲ್ಪಿಕ ಆಶಯದ ಹಿಂದಿನ ಪ್ರೇರಣೆಗಳು ಸಮರ್ಪಣೆ, ಸಮದರ್ಶನ, ಸ್ವೀಕೃತಿ, ಮಹದ ಅಭೀಪ್ಸೆ, ಆತ್ಮಕೃಷಿ ಮೊದಲಾದ ಮೌಲ್ಯಗಳ ಉಪಾಸನೆಯ ಸಂಕಲ್ಪ ಎಂದಿದ್ದಾರೆ[22] ಈ ಸಂಕಲ್ಪ, ಆದರ್ಶಗಳ ಪ್ರತೀಕವಾಗಿ 'ಬೆಳಕು' ಕಣವಿಯವರ ಕಾವ್ಯ ಕೇಂದ್ರವಾಗಿದೆ ಎಂಬುದು ಅವರ ಅಭಿಪ್ರಾಯ.

ಡಾ. ಆಮೂರ ಅವರು ಕಣವಿಯವರಲ್ಲಿ ಮತ್ತೆ ಮತ್ತೆ ಎತ್ತಿ ಹೇಳುವ ಗುಣ ಅವರ 'ಸ್ವಂತಿಕೆ'. ಧಾರವಾಡದ 'ಗೆಳೆಯರ ಗುಂಪಿನ ನಿಜವಾದ ವಾರಸದಾರರು ಕಣವಿಯವರೇ ಆದರೂ, ತಮ್ಮ ಪ್ರತಿಭೆಗೆ ಒಗ್ಗುವ ಅಂಶಗಳನ್ನು ಆ ಗುಂಪಿನಿಂದ ಹೀರಿಕೊಂಡು ಸ್ವಂತಿಕೆಯನ್ನಾಧರಿಸಿ ಬೆಳೆದರೇ ವಿನಾ ಕಳೆದುಕೊಳ್ಳಲಿಲ್ಲ ಎಂದು ಆಮೂರ ಹೇಳುತ್ತಾರೆ.[23]

ಕಣವಿಯವರ ಕಾವ್ಯವನ್ನು ಎಮ್. ಎಚ್. ಏಬ್ರಮ್ಸ್‌ರ ಪರಿಭಾಷೆಯಲ್ಲಿ 'ವರ್ಣಕ-ಚಿಂತಕ' (Descriptive-meditative) ಕಾವ್ಯವೆಂದು ಡಾ. ಆಮೂರ ಹೆಸರಿಸುತ್ತಾರೆ.[24] ಮುಂದುವರಿದು ಅವರೇ ಹೇಳುವಂತೆ, 'ಸಾಮಾನ್ಯವಾಗಿ ವರ್ಣಕ-ಚಿಂತಕ ಕವನಗಳಲ್ಲಿ ಚಿಂತನೆಗೆ ಪ್ರಾಮುಖ್ಯವಿರುತ್ತದೆ. ಆದರೆ ಕಣವಿಯವರ ಕವಿತೆಗಳಲ್ಲಿ ವರ್ಣನೆಯದೇ ಮೇಲುಗೈ.[25] ಈ 'ವರ್ಣನೆ', ಕುರ್ತುಕೋಟಿಯವರು ಹೇಳುವ 'ವರ್ಣನಾತ್ಮಕತೆ' ಮತ್ತು ಡಾ. ಡಿ. ಆರ್. ನಾಗರಾಜ್ ಗುರುತಿಸುವ 'ಭಾವಗೀತಾತ್ಮಕತೆ ಎಂಬುದನ್ನು ಇಲ್ಲಿ ಸ್ಮರಿಸಬೇಕು,

ಕಣವಿಯವರ ಕಾವ್ಯಕ್ಕೂ ಮತ್ತು ಪ್ರಕೃತಿಗೂ ಇರುವ ಸಂಬಂಧವನ್ನು ಡಾ. ಡಿ. ಆರ್. ನಾಗರಾಜರಂತೆ, ಆದರೆ ಭಿನ್ನ ನೆಲೆಯಲ್ಲಿ ವಿಶಿಷ್ಟವಾಗಿ ಗುರುತಿಸಿರುವ ಡಾ. ಆಮೂರ ಅವರು ಹೀಗೆ ಬರೆಯುತ್ತಾರೆ. "ಕಣವಿಯವರ ಪ್ರಕೃತಿಗೀತಗಳ ಮೂಲ ರಚನೆ ರೋಮ್ಯಾಂಟಿಕ್ ಕಾವ್ಯಮಾರ್ಗದಿಂದ ಬಂದುದಾದರೂ ನಿಯೋ ಕ್ಲಾಸಿಕಲ್ ( Neo classical ) ಅಥವಾ ಅಗಸ್ಟನ್ ( Augustan ) ಎಂದು ಕರೆಯಬಹುದಾದ ಗುಣಗಳನ್ನು ಒಳಗೊಂಡಿರುವುದು."[26]

ನವೋದಯ ಕಾಲದ ಮಹತ್ವದ ಕವಿ ಕಣವಿ ಅವರು ನವ್ಯ ಕಾಲದಲ್ಲಿ ಸ್ಥಿರವಾಗಿ ಕಾಲೂರಿ ನಿಂತ, ನಿಂತು ಬೆಳೆದ ಅಗಾಧತೆಯನ್ನು ಡಾ. ಆಮೂರ ಅವರು ನಿರ್ದಿಷ್ಟವಾಗಿ ಗುರುತಿಸಿ ಸಂಗ್ರಹವಾಗಿ ಹೀಗೆ ಹೇಳಿದ್ದಾರೆ: "ನವ್ಯಕಾವ್ಯದ ಅಗ್ನಿದಿವ್ಯದಲ್ಲಿ ಕಣವಿಯವರ ಕಾವ್ಯ ತನ್ನ ಆಶಯ-ಆಕಾರಗಳ ಮುಗ್ಧತೆಯನ್ನು

ಕಳೆದುಕೊಂಡು ಪ್ರಬುದ್ಧತೆಯನ್ನು ದೊರಕಿಸಿಕೊಂಡಿತು. ಸೌಂದರ್ಯ ಪಕ್ಷಪಾತದ ಜೋಲಿಯಿಂದ ಸುಧಾರಿಸಿಕೊಂಡು ಅಸುಂದರವಾದುದರ, ಅಸಹ್ಯವಾದುದರ ಅರ್ಥವಂತಿಕೆಯನ್ನು ಗ್ರಹಿಸಿ ಜೀವನವನ್ನು ಸಮಗ್ರವಾಗಿ ನೋಡುವ ಸಂಕೀರ್ಣ ದೃಷ್ಟಿಯನ್ನು ಪಡೆದುಕೊಂಡಿತು"[೨೭] ಎಂದಿದ್ದಾರೆ. ಹೀಗೆ ಮುಗ್ಧತೆಯಿಂದ ಪ್ರಬುದ್ಧತೆಗೆ, ಸುಂದರತೆಯಿಂದ ಅಸುಂದರತೆಯ ಕಡೆಗೆ, ಏಕಮುಖತೆಯಿಂದ ಜೀವನದ ಸಮಗ್ರತೆಯ ಕಡೆಗೆ, ಆ ಸಂಕೀರ್ಣತೆಯ ಕಡೆಗೆ ಕಣವಿಯವರ ಕಾವ್ಯ ನಡೆದು ಈ ನಾಲ್ಕು ದಶಕಗಳಲ್ಲಿ ಅದು ಸಾಧಿಸಿದ ಯಶಸ್ಸನ್ನು ಕನ್ನಡ ವಿಮರ್ಶೆ ಗಮನಿಸಿದ್ದಕ್ಕಿಂತ ಗಮನಿಸಬೇಕಾದ ಸಂಕೀರ್ಣ ಸ್ತರಗಳು ಇನ್ನೂ ಇರಬಹುದಾಗಿವೆ.

೩

"ನನಗೆ ಕಾವ್ಯವನ್ನು ಯಾವ ಹೆಸರಿನಿಂದಲೂ ಕರೆಯಲಿಷ್ಟವಿಲ್ಲ. ಅದು ಎಂಥ ಕಾವ್ಯವೆಂಬುದನ್ನು ಸಹೃದಯರು ನಿರ್ಣಯಿಸಲಿ. ನನ್ನ ದೃಷ್ಟಿಗಂತೂ ಕಾವ್ಯ ಒಂದೇ. ಅದು ನಿತ್ಯನೂತನವಾದುದು"[೨೮] ಎಂದು ಜಿ. ಎಸ್. ಶಿವರುದ್ರಪ್ಪನವರು ತಮ್ಮ ಕಾವ್ಯದ ಕುರಿತು ಹೇಳಿಕೊಂಡಿದ್ದರೂ, ಚೆನ್ನವೀರ ಕಣವಿಯವರಂತೆ ನವೋದಯ–ನವ್ಯ ಎರಡೂ ಸಂದರ್ಭಗಳಲ್ಲಿ ಕಾವ್ಯ ರಚಿಸಿದ ಇವರನ್ನೂ 'ಸಮನ್ವಯ ಕವಿ'ಗಳೆಂದು ಕನ್ನಡ ವಿಮರ್ಶಕರು ಗುರುತಿಸದೆ ಬಿಡಲಿಲ್ಲ. ಕಣವಿಯವರ ಹಾಗೆ ಶಿವರುದ್ರಪ್ಪನವರೂ ತಾವು ಸಮನ್ವಯ ಕವಿಗಳೆಂಬ ವಿಮರ್ಶಾಲೋಕದ ಮಾತನ್ನು ಅಲಕ್ಷಿಸುತ್ತಲೇ ಮುನ್ನಡೆದು ಒಳ್ಳೆಯ ಕಾವ್ಯವನ್ನು ಕೊಟ್ಟಿದ್ದಾರೆ.

"ಶಿವರುದ್ರಪ್ಪನವರ ಪ್ರಥಮ ಕಾವ್ಯಸ್ಫೂರ್ತಿ ಈಶ್ವರಸೃಷ್ಟಿಯ ಸೌಂದರ್ಯದಿಂದ ಮುಗ್ಧವಾದ ತರುಣ ಚೇತನವೊಂದರ ಆನಂದ ಆಶ್ಚರ್ಯಗಳಲ್ಲಿದೆ'' ಎನ್ನುವ ಡಾ. ರಂ. ಶ್ರೀ. ಮುಗಳಿ ಅವರು ಶಿವರುದ್ರಪ್ಪನವರ ಪ್ರಾರಂಭದ ಕವಿತೆಗಳಲ್ಲಿ 'ಶಿವದರ್ಶನದ ಭಾವ'ಗಳಿರುವಂತೆ 'ರುದ್ರಭಾವ'ಗಳೂ ಅಲ್ಲಲ್ಲಿ ತಲೆಯೆತ್ತಿರುವುದನ್ನು ಗುರುತಿಸುತ್ತಾರೆ. ಶಿವರುದ್ರಪ್ಪನವರ 'ಸಾಮಗಾನ'ದಲ್ಲಿನ ಸೌಂದರ್ಯ ಕುರಿತ ಮುಗ್ಧತೆ 'ಸಂಜೆದಾರಿ' ಸಂಕಲನದ ಹೊತ್ತಿಗೆ ಸಾಮಾಜಿಕ ಪರಿಸರದತ್ತ ಹೊರಳಿ ಬದಲಾಗುತ್ತ ವ್ಯಂಗ್ಯ, ವಿಡಂಬನೆಗಳೊಂದಿಗೆ ಮುಂದುವರಿದು 'ಅನಾವರಣ' ಸಂಕಲನದಲ್ಲಿ ವ್ಯಂಗ್ಯದ ಆಕ್ರೋಶ ಕಳೆದುಕೊಂಡು, ಸ್ಥಿರವಾದ ಹಗುರಾದ ಕಲಾಕೃತಿಯಾದದ್ದುನ್ನು ತಮ್ಮ ವಿಮರ್ಶೆಯಲ್ಲಿ ಡಾ. ಮುಗಳಿಯವರು ಚರ್ಚಿಸಿದ್ದಾರೆ.[29]

ಶಿವರುದ್ರಪ್ಪನವರ ಮೊದಲ ಸಂಕಲನಗಳನ್ನು ವಿಮರ್ಶಿಸುತ್ತ ಚೆನ್ನವೀರ ಕಣವಿಯವರು 'ಪ್ರಕೃತಿಸೌಂದರ್ಯ, ಬಾಲ್ಯದ ನೆನಹುಗಳು, ಮಗುವಿನ ಮುಗ್ಧತೆ ಇವು ಸಮರಸಗೊಂಡು ಶಿವರುದ್ರಪ್ಪನವರ ಕಾವ್ಯಸೃಷ್ಟಿಯ ಸೋಜಿಗವನ್ನು ಸೆರೆಹಿಡಿದು ನಮ್ಮ ವಿಸ್ಮಯಾನಂದವನ್ನು ಹೆಚ್ಚಿಸುತ್ತವೆ' ಎಂದು ನುಡಿದಿದ್ದಾರೆ[30]. ಮುಂದುವರಿದು ಹೇಳುತ್ತ'ಮೊದಲಿನ ಮುಗ್ಧಸ್ನಿಗ್ಧ ಬೆರಗು ಕವಿಯು ಬೆಳೆದಂತೆ ಅನುಭವ ದಟ್ಟವಾಗುತ್ತ ಪ್ರಬುದ್ಧ ಪರಿಭಾವನೆಗೆ ಎಡೆಕೊಟ್ಟು ಮಾನವ–ಪ್ರಕೃತಿ-ಜೀವನಗಳ ಸಂಗಮದಲ್ಲಿ ಮುಳುಗಿ ಬೇರೊಂದು ಮೆರಗನ್ನು ಪಡೆಯುತ್ತದೆ. ಸಂತೋಷಾಶ್ಚರ್ಯ, ಚಿಂತನೆಯಿಂದ ಸಖೇದಾಶ್ಚರ್ಯವಾಗಿ ಪರಿಣಮಿಸುತ್ತದೆ' ಎನ್ನುತ್ತಾರೆ[31]. ಶಿವರುದ್ರಪ್ಪನವರ ಕಾವ್ಯದ ಬೆಳವಣಿಗೆಯನ್ನು ಎರಡು ಘಟ್ಟಗಳಲ್ಲಿ ವಿಂಗಡಿಸಿಕೊಂಡು ಕಣವಿಯವರು ಎತ್ತುವ ಇಲ್ಲಿನ ವಿಚಾರಗಳು ಮಹತ್ತ್ವಪೂರ್ಣವಾದುವು. ಶಿವರುದ್ರಪ್ಪನವರ ಕಾವ್ಯದ ಮೊದಲಿನ ಮುಗ್ಧ ಸ್ನಿಗ್ಧ ಬೆರಗನ್ನು 'ಸಂತೋಷಾಶ್ಚರ್ಯ'ದ ಘಟ್ಟವೆಂದೂ, ಬಾಲ್ಯದ ನೆನಹು ಮತ್ತು ಪ್ರಕೃತಿಯ ಸಖ್ಯದ ಬೆರಗಿನಿಂದ ಬಿಡಿಸಿಕೊಂಡು ವ್ಯಕ್ತಿ ಬದುಕಿನ ಚಿಂತನೆಯಲ್ಲಿ ಮುಳುಗಿದ್ದು 'ಸಖೇದಾಶ್ಚರ್ಯ'ದ ಘಟ್ಟವೆಂದೂ ಕಣವಿಯವರು ಹೇಳುತ್ತಾರೆ. 'ಸಂತೋಷಾಶ್ಚರ್ಯ', 'ಸಖೇದಾಶ್ಚರ್ಯ'ಗಳಲ್ಲಿ 'ಆಶ್ಚರ್ಯ' ಭಾವ ಸ್ಥಾಯಿರೂಪದಲ್ಲಿ ಬಳಕೆಯಾಗಿರುವುದು ಶಿವರುದ್ರಪ್ಪನವರ ಜೀವನ ಹಾಗೂ ಕಾವ್ಯಜೀವನದ ಪ್ರಮುಖ ಲಕ್ಷಣವನ್ನು ಸೂಚಿಸುತ್ತಿರುವಂತಿದೆ. 'ಸಂತೋಷ'ದಿಂದ 'ಸಖೇದ'ಕ್ಕೆ ಅವರ ಬೆಳವಣಿಗೆ.

ಎಲ್. ಎಸ್. ಶೇಷಗಿರಿರಾವ್ ಅವರು "ಶಿವರುದ್ರಪ್ಪನವರ ಕಾವ್ಯ ಮುಖ್ಯವಾಗಿ ಆವರಣ–ವ್ಯಕ್ತಿತ್ವಗಳ ಬಾಂಧವ್ಯವನ್ನು ಕುರಿತ ಕಾವ್ಯ; ಈ ಬಾಂಧವ್ಯವನ್ನು ಅರ್ಥವತ್ತಾಗಿ ಸಾಧಿಸುವ ಪ್ರಯತ್ನದ ಕಾವ್ಯ" ಎನ್ನುತ್ತಾರೆ.[32] ಶಿವರುದ್ರಪ್ಪನವರ ಮೊದಲ ಹಂತದ ಕವಿತೆಗಳನ್ನು ಲಕ್ಷಿಸಿ ಹೀಗೆ ನುಡಿದ ಅವರೇ ಕಾಲಕಳೆದಂತೆ ಶಿವರುದ್ರಪ್ಪನವರ ಕವನಗಳಲ್ಲಿ ಸುತ್ತಲಿನ ಜಗತ್ತಿನ ಅರಿವಿನ ಸ್ವರೂಪ ಬದಲಾದದ್ದನ್ನು, 'ದೀಪದ ಹೆಜ್ಜೆ' ಸಂಕಲನದಲ್ಲಿ 'ಮಾನವ ಜಗತ್ತಿನ ಸಂಕೀರ್ಣತೆ'ಯೊಂದಿಗೆ ಅದು ಪ್ರಕಟವಾದದ್ದನ್ನು ಗುರುತಿಸುತ್ತಾರೆ.

'ದೀಪಧಾರಿ' ಸಂಕಲನದಿಂದ ಕಣವಿಯವರು ನವ್ಯತೆಯ ಕಡೆಗೆ ತಿರುಗಿದ ಹಾಗೆ, ಶಿವರುದ್ರಪ್ಪನವರು 'ದೀಪದ ಹೆಜ್ಜೆ' ಸಂಕಲನದಿಂದ ನವ್ಯತೆಯ ಕಡೆಗೆ ಹೊರಳಿದರು. ಸಮಾನ ಮನೋಧರ್ಮದ ಇವರೀರ್ವರ ಈ ಸಂಕಲನಗಳ ಶೀರ್ಷಿಕೆಯಲ್ಲಿ ಹೋಲಿಕೆ ಇರುವುದು ಆಕಸ್ಮಿಕವಾದರೂ ಗಮನಾರ್ಹವಾಗಿದೆ; ಅದು 'ದೀಪಧಾರಿ', ಇದು 'ದೀಪದ ಹೆಜ್ಜೆ'. ಕಾವ್ಯಶಿಲ್ಪದ ದೃಷ್ಟಿಯಿಂದ ಅಡಿಗರಿಗೆ 'ಚಂಡೆ

ಮುದ್ದಳೆ' ಇದ್ದ ಹಾಗೆ ಶಿವರುದ್ರಪ್ಪನವರಿಗೆ ' ದೀಪದ ಹೆಜ್ಜೆ ' ಎನ್ನುವ ಡಾ. ಡಿ. ಆರ್. ನಾಗರಾಜ್,[33] ಶಿವರುದ್ರಪ್ಪನವರ ಕಾವ್ಯಬದುಕನ್ನು ಮೂರು ಘಟ್ಟಗಳಲ್ಲಿ ವಿಂಗಡಿಸಿ ನೋಡುತ್ತಾರೆ; ೧) ಸೌಂದರಾತ್ಮಕ ಘಟ್ಟ ೨) ಮೆಟಫಿಸಿಕಲ್ ಕಾವ್ಯದ ಘಟ್ಟ ೩) ರುದ್ರ ತಿಳಿವಿನ ಘಟ್ಟ.[34]

'ಸೌಂದರಾತ್ಯಕ ಘಟ್ಟ'ದ ಕಾವ್ಯ 'ಅತ್ಯಂತ ಬಿಕ್ಕಟ್ಟಿನ ಗಳಿಗೆಗಳಲ್ಲಿ ಮೆಲ್ಲನೆ ಮನಸ್ಸನ್ನು ತೇಲಿಸುವಂಥದು' ಎನ್ನುವ ನಾಗರಾಜ್ ಈ ಘಟ್ಟದ ಶಿವರುದ್ರಪ್ಪನವರ ಕಾವ್ಯವನ್ನು 'ಮಿರಾಂಡಳ ರೀತಿಯದು' ಎನ್ನುತ್ತಾರೆ.[35] 'ಸಾತ್ವಿಕ ಹುಚ್ಚುತನ' ಈ ಘಟ್ಟದ ಮುಖ್ಯಗುಣವೆಂದೂ, 'ಒಂದು ಕ್ಷಣದ ಅನುಭವ'ವನ್ನು ಹೇಳುವ, 'ನಿರ್ದಿಷ್ಟ ಕಾಲಾವಧಿಯ, ಮನಸ್ಥಿತಿಯ ಅಭಿವ್ಯಕ್ತಿ' ಇದರ ಇನ್ನೊಂದು ಗುಣವೆಂದೂ ಹೇಳುತ್ತ, ಶಿವರುದ್ರಪ್ಪನವರ ಮೊದಲ ಹಂತದ ಕಾವ್ಯ ಈ ಗುಣಗಳನ್ನು ಹೊಂದಿದೆ ಎಂದು ಅಭಿಪ್ರಾಯಪಡುತ್ತಾರೆ.[36]

ಎರಡನೆಯ ಘಟ್ಟದ 'ಮೆಟಫಿಸಿಕಲ್ ಕಾವ್ಯ'ದಲ್ಲಿ ಶಿವರುದ್ರಪ್ಪನವರ 'ದೀಪದ ಹೆಜ್ಜೆ' ಯಿಂದ 'ತೆರೆದ ದಾರಿ' ಯ ತನಕದ ಕವನಗಳನ್ನು ಸ್ಥೂಲವಾಗಿ ಸೇರಿಸಬಹುದೆನ್ನುತ್ತಾರೆ ಡಾ. ನಾಗರಾಜ್.[37] 'ಇಲ್ಲಿಯ ಸೌಂದರ್ಯಾರಾಧನೆ ಮೆಟಫಿಸಿಕಲ್ ತಾತ್ವಿಕತೆಯಿಂದ ಪರಿಷ್ಕೃತವಾಗಿದೆ' ಎನ್ನುವ ಅವರು, 'ಧೀರೋದಾತ್ತ ಆಶಾವಾದ'ವು ಮೆಟಫಿಸಿಕಲ್ ಕಾವ್ಯದ ಮುಖ್ಯಗುಣ ಎನ್ನುತ್ತಾರೆ; 'ಘರ್ಷಣೆಗಳ ಅರಿವಿದ್ದೂ ಅದನ್ನು ದಾಟಬಲ್ಲೆ ಎಂಬ ಆದಿಭೌತಿಕ ಆಶಾವಾದ' ಎಂದು ಈ ಗುಣವನ್ನು ವಿವರಿಸಿದ್ದಾರೆ.[38] ಮುಂದುವರಿದು ಈ ಘಟ್ಟದ ಶಿವರುದ್ರಪ್ಪನವರ ಕವಿತೆಗಳಲ್ಲಿ ಮೆಟಫಿಸಿಕಲ್ ಅಂಶಗಳು ದಟ್ಟವಾಗಿದ್ದರೂ'ಅವು ಎಲ್ಲಿಯೂ ಧಾರ್ಮಿಕ ನಿಗೂಢವಾದಿ ನೆಲೆಗಳಿಗೆ ಹೋಗಿ ತಲುಪುವದಿಲ್ಲ; ಪರಂಪರಾಗತ ಮೌಲ್ಯಗಳ ಮಡಿಲಿಗೆ ಬೀಳುವದಿಲ್ಲ' ಎನ್ನುತ್ತಾರೆ.[39] 'ಸಾತ್ವಿಕ ವಿನಯ' ಹಾಗೂ ಕಾವ್ಯಶಿಲ್ಪದ ದೃಷ್ಟಿಯಿಂದ 'ಪ್ರಬುದ್ಧತೆ' ಶಿವರುದ್ರಪ್ಪನವರ ಈ ಘಟ್ಟದ ಕವಿತೆಗಳಲ್ಲಿ, ವಿಶೇಷವಾಗಿ 'ದೀಪದ ಹೆಜ್ಜೆ' ಸಂಕಲನದಲ್ಲಿ ಕಾಣಿಸಿಕೊಂಡಿರುವುದನ್ನು ಅವರು ಗುರುತಿಸಿದ್ದಾರೆ.[40]

ಮೂರನೆಯ ಘಟ್ಟ 'ರುದ್ರ ತಿಳಿವಿನ ಘಟ್ಟ' 'ವಿಷಮ ವಾತಾವರಣ' ದ 'ಟ್ರ್ಯಾಜಿಕ್' ಗುಣದ ಈ ಕಾವ್ಯಕಕ್ಷೆಯಲ್ಲಿ ಶಿವರುದ್ರಪ್ಪನವರ 'ತೆರೆದ ದಾರಿ' ಸಂಕಲನದ ನಂತರದ ಕವಿತೆಗಳನ್ನು ಸೇರಿಸುವ ಡಾ. ನಾಗರಾಜ್ ಈ ಘಟ್ಟದ ರುದ್ರ ತಿಳಿವು ತನ್ನ ಶೃಂಗವನ್ನು ತಲುಪಿದ್ದು ಅವರ 'ಗೋಡೆ' ಸಂಕಲನದಲ್ಲಿ ಎಂದು ಅಭಿಪ್ರಾಯಪಡುತ್ತಾರೆ.[41] 'ಸುತ್ತಲೂ ಮೊರೆದ ಕತ್ತಲಿನ, ಕೆಡುಕಿನ, ಪ್ರೀತಿಹೀನ

ಸ್ಥಿತಿಯ ಕಾವ್ಯ ಅದು. ಹೃದಯ ಹೃದಯಗಳ ಸಂಬಂಧ ಕಡಿದುಬಿದ್ದ ಒಂದು ವಿಷಮ ವಾತಾವರಣದ ಕಾವ್ಯ ಅದು' ಎಂದು ಅದನ್ನು ವರ್ಣಿಸುತ್ತಾರೆ.[42]

ಶಿವರುದ್ರಪ್ಪನವರ 'ಸಮಗ್ರಕಾವ್ಯ'ಕ್ಕೆ ಮುನ್ನುಡಿ ಬರೆದಿರುವ ಕೆ. ವಿ. ನಾರಾಯಣ ಅವರು "ಜಿ. ಎಸ್. ಎಸ್. ಅವರ ಹಲವು, ಜನಮೆಚ್ಚಿದ ಕವಿತೆಗಳಲ್ಲಿ ಎದ್ದು ಕಾಣುವುದು ಪ್ರಸಾದ ಗುಣ" ಎನ್ನುತ್ತಾರೆ.[43] ಜಿ. ಎಸ್. ಎಸ್. ಅವರ ಕಾವ್ಯದಲ್ಲಿ ಎರಡು ಜಗತ್ತಿನ ಸ್ಪಂದನಗಳನ್ನು ಅವರು ಗುರುತಿಸುತ್ತಾರೆ, ೧) ಜೀವಸಮೃದ್ಧ ಪ್ರಕೃತಿ ೨) ಮಾನವಕೇಂದ್ರಿತ ಸಮಾಜ.[44] ಈ ಎರಡು ಸ್ಪಂದನಗಳನ್ನು ಅವರು ಕ್ರಮವಾಗಿ ಇತ್ಯಾತ್ಮಕ ಹಾಗೂ ನೇತ್ಯಾತ್ಮಕ ಶಕ್ತಿಗಳೆಂದು ವಿವರಿಸಿದ್ದಾರೆ.[45] ವಿಸ್ಮಯ, ಉತ್ಸುಕತೆಗಳನ್ನು ಇತ್ಯಾತ್ಮಕ ನೆಲೆಗಳಲ್ಲೂ. ಖಿನ್ನತೆ, ಸಾತ್ವಿಕ, ಕ್ರೋಧ ಮತ್ತು ಹತಾಶೆಯ ಅಂಚಿನಲ್ಲಿ ಸುಳಿಯುವ ಅಸಹಾಯಕತೆಯನ್ನು ನೇತ್ಯಾತ್ಮಕ ನೆಲೆಗಳಲ್ಲೂ ಅವರು ಗುರುತಿಸುತ್ತಾರೆ.[46] ಕೆ. ವಿ. ನಾರಾಯಣ ಅವರು ಮಾಡುವ ಈ ವಿಭಜನೆ, ಜಿ. ಎಸ್. ಎಸ್. ಅವರ ಕಾವ್ಯದ ಕುರಿತು ಚೆನ್ನವೀರ ಕಣವಿ ಅವರು ಹೇಳುವ 'ಸಂತೋಷಾಶ್ಚರ್ಯ' ಹಾಗೂ 'ಸಖೇದಾಶ್ಚರ್ಯ'ಗಳನ್ನು ಕ್ರಮವಾಗಿ ಹೋಲುತ್ತಿರುವುದು ಗಮನಾರ್ಹವಾಗಿದೆ.

ಕೊನೆಯದಾಗಿ, ಸರೀಕರಾದ ಕಣವಿಯವರ ಹಾಗೆ ನವೋತ್ತರ ಸಂದರ್ಭದಲ್ಲೂ ತಮ್ಮ ಕಾವ್ಯರಚನೆಯನ್ನು ವಿಶಿಷ್ಟವಾಗಿ ಮುಂದುವರಿಸಿರುವ ಶಿವರುದ್ರಪ್ಪನವರ, ಅಂತೆಯೇ ಕಣವಿಯವರ ಕಾವ್ಯದ ಸಂಕೀರ್ಣ ನೆಲೆಗಳ ಕುರಿತು ಮುಕ್ತ ವಿಮರ್ಶೆ ಇನ್ನೂ ಬರಬೇಕಾಗಿದೆ. ಅಡಿಗರ ನಿಷ್ಠುರ ನವ್ಯಕ್ಕೆ ಹೊರತಾದ ಕಣವಿ–ಶಿವರುದ್ರಪ್ಪನವರ ಭಾವಗೀತಾತ್ಮಕ ನವ್ಯವು ಹೇಗೆ ಕನ್ನಡ ಪರಂಪರೆಯ ಅರ್ಥಪೂರ್ಣ ಕಾವ್ಯ ಎಂಬುದನ್ನು ನಾಳಿನ ವಿಮರ್ಶೆ ಗುರುತಿಸಬೇಕಾಗಿದೆ. ಮತ್ತು ಹೀಗೆ ಗುರುತಿಸಿದಾಗಲೇ ನವೋದಯ ನವ್ಯ ಪಂಥದಾಚೆಗಿನ ಕವಿಯೊಬ್ಬನ ಮಾನಸಿಕ ಬೆಳವಣಿಗೆಗೆ ಅರ್ಥವೂ, ಆತನ ಅಭಿವ್ಯಕ್ತಿಯ ಪ್ರಾಮಾಣಿಕತೆ ಮತ್ತು ಸ್ವಂತಿಕೆಗೆ ನ್ಯಾಯವೂ ಒದಗುತ್ತದೆಯಲ್ಲದೆ, ಪ್ರಕೃತಿಯ ಆರಾಧನೆಯಿಂದ ಸಾಮಾಜಿಕ ವಿಪರ್ಯಾಸಗಳಿಗೆ ತಮ್ಮ ಕಾವ್ಯವನ್ನು ಕೊಂಡೊಯ್ದ ಕಣವಿ–ಶಿವರುದ್ರಪ್ಪನವರ ಸಾಹಿತ್ಯ ಬದುಕಿನ ನಿಜವಾದ ವಿಮರ್ಶೆ ಆಗ ಸಾಧ್ಯವಾಗುತ್ತದೆ.

**ಅಡಿ ಟಿಪ್ಪಣಿ**

೧. 'ದೀಪಧಾರಿ' ಸಂಕಲನದಲ್ಲಿ ಕಣವಿ ಅವರು 'ಕಾವ್ಯವಾಚನಕ್ಕೆ ಮೊದಲು' ಬರೆಯುತ್ತ
೨. 'ಚೆಂಬೆಳಕು', ಪು. ೧೨೩
೩. ಚೆಂಬೆಳಕು, ಪು. ೧೮೬
೪. 'ಸಮಗ್ರ ಕಾವ್ಯ', ಮುನ್ನುಡಿಯಲ್ಲಿ, ಪು. ೭ ಮತ್ತು ೮
೫. 'ಆಕಾಶಬುಟ್ಟಿ', ಹಿನ್ನುಡಿಯಲ್ಲಿ,
೬. 'ಸಂಕ್ರಮಣ' (೧೫, ೭೦)
೭. 'ಚೆಂಬೆಳಕು', ಪು. ೨೧೬–೨೧೮
೮. ಚೆಂಬೆಳಕು, ಪು. ೨೫೮
೯. ಅದೆ
೧೦. ಅದೇ, ಪು. ೨೫೯
೧೧. ನವ್ಯಕಾವ್ಯ ಪ್ರಯೊಗ, ಪು. ೧೦೫
೧೨. ನವ್ಯಕಾವ್ಯ ಪ್ರಯೋಗ, ಪು. ೧೦೭
೧೩. ಶಕ್ತಿಶಾರದೆಯ ಮೇಳ, ಪು. ೨೩೯–೨೪೦
೧೪. ಅದೇ, ಪು. ೨೪೧
೧೫. ಅದೇ, ಪು. ೨೪೧
೧೬. ಅದೇ
೧೭. ಅಮೃತ ಮತ್ತು ಗರುಡ, ಪು. ೧೩೧
೧೮. ಅದೇ ಪು. ೧೩೧
೧೯. ಹೊಂಬೆಳಕು, ಪ್ರಸ್ತಾವನೆ, ಪು.
೨೦. ಅದೇ
೨೧. ಅದೇ ಪು. V
೨೨. ಅದೇ ಪು. IV
೨೩. ಹೊಂಬೆಳಕು, ಪ್ರಸ್ತಾವನೆ, ಪು. VI
೨೪. ಅದೇ, ಪು. VII
೨೫. ಅದೇ, ಪು. VIII
೨೬. ಅದೇ
೨೭. ಹೊಂಬೆಳಕು, ಪ್ರಸ್ತಾವನೆ, ಪು. XVIII
೨೮. 'ಸಂಜೆದಾರಿ', ಪ್ರಸ್ತಾಯನೆಯಲ್ಲಿ

೨೯. 'ಸ್ನೇಹಕಾರ್ತೀಕ', ಪು. ೧೧೭–೧೨೦
೩೦. ಅದೇ, ಪು. ೧೨೬
೩೧. ಅದೇ, ಪು. ೧೩೧
೩೨. ಸ್ನೇಹ ಕಾರ್ತೀಕ, ಪು. ೧೩೮
೩೩. ಅಮೃತ ಮತ್ತು ಗರುಡ, ಪು. ೧೧೧
೩೪. ಅಮೃತ ಮತ್ತು ಗರುಡ, ಪು. ೧೦೭–೧೧೮
೩೫. ಅದೇ, ಪು. ೧೦೯
೩೬. ಅದೇ, ಪು. ೧೧೦
೩೭. ಅದೇ, ಪು. ೧೧೧
೩೮. ಅದೇ, ಪು. ೧೧೨
೩೯. ಅದೇ, ಪು. ೧೧೩
೪೦. ಅದೇ, ಪು. ೧೧೧–೧೧೩
೪೧. ಅದೇ, ಪು. ೧೧೩
೪೨. ಅಮೃತ ಮತ್ತು ಗರುಡ, ಪು. ೧೧೩
೪೩. 'ಸಮಗ್ರ ಕಾವ್ಯ', ಮುಂನ್ನುಡಿ, ಪು. ೩
೪೪. ಅದೇ, ಪು. IV
೪೫. ಅದೇ,
೪೬. ಅದೇ,

— ● —

# ನಾನು ಮತ್ತು ನನ್ನ ಕಾವ್ಯ

ಜಿ. ಎಸ್. ಶಿವರುದ್ರಪ್ಪ

ನನ್ನ ಕಾವ್ಯವನ್ನು ಕುರಿತು ನಾನೇ ಹೇಳಿಕೊಳ್ಳುವುದು ನನಗೆ ಪ್ರಿಯವಾದ ಸಂಗತಿಯೇನೂ ಅಲ್ಲ; ನನ್ನ ಕಾವ್ಯವನ್ನು ಕುರಿತು ಪ್ರೀತಿಯಿಂದ ಓದಿದವರು, ಮತ್ತು ಅದನ್ನು ಕುರಿತು ವಿಚಾರ ಮಾಡಿದವರು ಏನು ಹೇಳುತ್ತಾರೆ ಅನ್ನುವುದು ನನಗೆ ಮುಖ್ಯವಾದುದ್ದು. ಈ ದೃಷ್ಟಿಯಿಂದ ಮುಂಡರಗಿಯಂಥ ಗ್ರಾಮೀಣ ಪರಿಸರದಲ್ಲಿ ನನ್ನ ಹಾಗೂ ನನ್ನ ಗೆಳೆಯರಾದ ಶ್ರೀ ಚೆನ್ನವೀರ ಕಣವಿಯವರ ಕಾವ್ಯವನ್ನು ಕುರಿತು ಎರಡು ದಿನಗಳ ಕಾಲ ಒಂದು ವಿಚಾರ ಸಂಕಿರಣ ಏರ್ಪಟ್ಟಿತ್ತು ಮತ್ತು ಅದರಲ್ಲಿ ನಮ್ಮಿಬ್ಬರ ಕವಿತೆಯನ್ನು ಕುರಿತು ಸಾಕಷ್ಟು ಚರ್ಚೆ ನಡೆಯಿತು ಅನ್ನುವ ಸಂಗತಿ ನನಗೂ, ಕಣವಿಯವರಿಗೂ ತುಂಬ ಸಂತೋಷದ ವಿಷಯವಾಗಿದೆ.

ನಾನೂ ಕಣವಿಯವರೂ ಸಮಕಾಲೀನರು, ಉತ್ತರ ಕರ್ನಾಟಕದ ಕವಿ ಬೇಂದ್ರೆಯವರ ಕಾವ್ಯೋತ್ಸಾಹದ ಗಾಳಿಯಲ್ಲಿ ಅವರು, ಇತ್ತ ದಕ್ಷಿಣದ ಮೈಸೂರಿನ ಕವಿ ಕುವೆಂಪು ಅವರ ಪ್ರಭಾವ ಪರಿಸರದಲ್ಲಿ ನಾನು ನಮ್ಮ ನಮ್ಮ ಕಾವ್ಯಜೀವನವನ್ನು ಪ್ರಾರಂಭ ಮಾಡಿಕೊಂಡು ಬೆಳೆದವರು. ನಮ್ಮಿಬ್ಬರ ಕಾವ್ಯದಲ್ಲಿ ಸಾಕಷ್ಟು ಸಾಮ್ಯ ವಿದೆ ಎಂದು ಕೆಲವು ವಿಮರ್ಶಕರು ಹೇಳುತ್ತಾರೆ. ಆ ಸಾಮ್ಯದ ಮುಖ್ಯಲಕ್ಷಣವೆಂದರೆ ನನಗೆ ತೋರುವ ಮಟ್ಟಿಗೆ–ನಾವಿಬ್ಬರೂ ಹೊಸಗನ್ನಡ ಕಾವ್ಯದ ಹಲವು ಸಾಹಿತ್ಯ ಚಳುವಳಿಗಳ ಮೂಲಕ ಹಾದುಬಂದರೂ, ಆ ಯಾವ ಚಳುವಳಿಯೊಂದಿಗೂ ವೈಯಕ್ತಿಕವಾದ ಹಾಗೂ ಗಾಢವಾದ ಸಂಬಂಧಗಳನ್ನು ಇರಿಸಿಕೊಳ್ಳಲಿಲ್ಲ ಅನ್ನುವುದು; ಹಾಗೆ ಸಂಬಂಧವನ್ನಿರಿಸಿಕೊಳ್ಳದೆಯೇ ನಮ್ಮದೇ ಆದ ಪ್ರತ್ಯೇಕ ನಿಲುವುಗಳನ್ನು

ಉಳಿಸಿಕೊಂಡೆವು ಅನ್ನುವುದು. ನಮ್ಮ ಬರಹಗಾರರನ್ನು ಆಯಾ ಸಾಹಿತ್ಯ ಚಳುವಳಿಗಳ ಚೌಕಟ್ಟಿನಲ್ಲಿ ಇರಿಸಿ ಚರ್ಚೆ ಮಾಡುವುದನ್ನೆ ಇಷ್ಟಪಟ್ಟ ನಮ್ಮ ಸಾಹಿತ್ಯ ವಿಮರ್ಶೆ, ಈ ಚಳುವಳಿಗಳಿಂದಾಚೆ ನಿಂತು ಬರೆದ ನಮ್ಮಂಥವರ ಬಗೆಗೆ ಅಂಥ ಉತ್ಸಾಹವನ್ನೇನೂ ತೋರಿಸಲಿಲ್ಲ; ಆದರೆ ಸಂಪೂರ್ಣ ನಿರ್ಲಕ್ಷಿಸಲೂ ಅದಕ್ಕೆ ಸಾಧ್ಯವಾಗದ ಕಾರಣ ಮತ್ತು ನಮ್ಮಂಥವರ ಬರಹವನ್ನು ಯಾವ ಚೌಕಟ್ಟಿನಲ್ಲಿರಿಸಿ ಚರ್ಚಿಸಬಹುದು ಎಂಬ ಗೊಂದಲಕ್ಕೆ ಬಿದ್ದ ಕಾರಣ, ನನ್ನ ಹಾಗೂ ಕಣವಿಯವರ ಕಾವ್ಯವನ್ನು 'ಸಮನ್ವಯಕಾವ್ಯ' ಎಂದೂ, ನಮ್ಮನ್ನು ಸಮನ್ವಯಕವಿಗಳೆಂದೂ ಹಣೆಚೀಟಿ ಅಂಟಿಸಿ ಕೈ ತೊಳೆದುಕೊಂಡಿತು. ಇವತ್ತಿಗೂ ಸಮನ್ವಯ ಕವಿಗಳೆಂದು ನಮ್ಮನ್ನು ಕರೆಯುವ ಅಪಸ್ವರವೊಂದು ಆಗಾಗ ವಿಮರ್ಶೆಯ ಹೆಸರಿನಲ್ಲಿ ಕೇಳಿಬಂದುದುಂಟು. ಈ ಕುರಿತು ನನ್ನ ಸ್ನೇಹಿತರಾದ ಕಣವಿಯವರು ಏನು ಹೇಳುತ್ತಾರೋ ನನಗೆ ತಿಳಿಯದು. ಆದರೆ ನಾನು ಮಾತ್ರ 'ಸಮನ್ವಯ ಕವಿ' ಎಂದು ನನ್ನನ್ನು ಕರೆಯುವುದನ್ನು ವಿರೋಧಿಸುತ್ತೇನೆ. ಯಾಕೆಂದರೆ ಸಮನ್ವಯ ಕಾವ್ಯ, ಸಮನ್ವಯ ಕವಿ ಎಂಬ ಮಾತುಗಳನ್ನು ಕನ್ನಡ ಸಾಹಿತ್ಯವಿಮರ್ಶೆಯ ಸಂದರ್ಭದಲ್ಲಿ ಬಳಸಿದವರು, ಈ ಮಾತುಗಳು ಏನನ್ನು ಸೂಚಿಸುತ್ತವೆ ಎಂಬುದನ್ನಾಗಲೀ, ಮತ್ತು ಸಮನ್ವಯಕಾವ್ಯ ಎಂಬುದೊಂದು ಇದ್ದರೆ ಅದರ ಲಕ್ಷಣಗಳೇನು ಎಂಬುದನ್ನಾಗಲೀ ಕುರಿತು ಗಂಭೀರವಾಗಿ ಯೋಚನೆ ಮಾಡಿದಂತೆ ತೋರುವುದಿಲ್ಲ, ನಿಜವಾಗಿ ನೋಡಿದರೆ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸಮನ್ವಯ' ಎಂಬ ಹೆಸರಿನ, ಸಾಹಿತ್ಯ ಚಳುವಳಿಯಾಗಲೀ, ಆ ಹೆಸರಿನ ಸಾಹಿತ್ಯ ನಿರ್ಮಿತಿಯಾಗಲೀ ಇಲ್ಲವೆಂದೇ ನನ್ನ ತಿಳುವಳಿಕೆ. ಹೀಗಿರುವಾಗ ಪ್ರಚಲಿತವಾದ ಯಾವ ಸಾಹಿತ್ಯ ಚಳುವಳಿಗಳ ಚೌಕಟ್ಟಿನೊಳಕ್ಕೂ ಸೇರಿಲ್ಲದಂತೆ ತೋರುವ ನನ್ನ ಹಾಗೂ ಕಣವಿಯವರ ಕಾವ್ಯವನ್ನು, 'ಸಮನ್ವಯ' ಎಂಬ, ಇಲ್ಲದ ಕಾವ್ಯ ಪರಿಕಲ್ಪನೆಯೊಂದರೊಳಕ್ಕೆ ಸೇರಿಸುವ ಕೆಲವು ವಿಮರ್ಶಕರ ಚಮತ್ಕಾರಗಳನ್ನು ಗಂಭೀರವಾಗಿ ತೆಗೆದುಕೊಳ್ಳುವ ಅಗತ್ಯವೇನೂ ಇಲ್ಲ. ಇದು ಹೇಗೇ ಇರಲಿ. ಈ ಹೊತ್ತು ಆಧುನಿಕ ಕನ್ನಡ ಸಾಹಿತ್ಯವನ್ನು ಚಲನಶೀಲವನ್ನಾಗಿಸಿದ ಹಾಗೂ ನಿಯಂತ್ರಿಸಿದ ಹಲವು ಚಳುವಳಿಗಳ ಅಬ್ಬರ ತಣ್ಣಗಾಗಿದೆ. ಈ ನೆಲೆಯಲ್ಲಿ ಮತ್ತೆ ಈ ಅರ್ಧಶತಮಾನದ ಕಾಲಾವಧಿಯಲ್ಲಿ ತಮ್ಮನ್ನು ಬರವಣಿಗೆಯಲ್ಲಿ ಸೃಜನಾತ್ಮಕವಾಗಿ ತೊಡಗಿಸಿಕೊಂಡವರೆಲ್ಲರ ಕೊಡುಗೆಗಳನ್ನು ವಸ್ತುನಿಷ್ಠವಾದ ಪರಿಶೀಲನೆ ಹಾಗೂ ಪುನರವಲೋಕನಕ್ಕೆ ಗುರಿಪಡಿಸಲು ಇದು ಸಕಾಲವಾಗಿದೆ. ಇಂಥ ಹೊತ್ತಿನಲ್ಲಿ ಮುಂಡರಗಿಯಂಥ ಗ್ರಾಮೀಣ ಪರಿಸರದ ಸಹೃದಯತೆ ಕನ್ನಡದ ಕವಿಗಳಿಬ್ಬರನ್ನು ತುಂಬ ಪ್ರೀತಿಯಿಂದ ಅರ್ಥಮಾಡಿಕೊಳ್ಳುವ ಪ್ರಯತ್ನವೊಂದನ್ನು ಪ್ರಾರಂಭಿಸಿರುವುದು ಅತ್ಯಂತ ಅರ್ಥಪೂರ್ಣವಾದ ಸಂಗತಿಯಾಗಿದೆ.

ಹಾಗೆ ನೋಡಿದರೆ ನಾನೂ ಇಂಥ ಗ್ರಾಮೀಣ ಪರಿಸರದಿಂದ ಬಂದವನೇ. ನನ್ನೆದುರಿಗೆ ಕಾಣುವ ಅನೇಕ ಸಾಮಾನ್ಯ ಸಾಮಾಜಿಕ ಹಂತದ ವಿದ್ಯಾರ್ಥಿಗಳ ಬದುಕಿಗಿಂತ ನನ್ನ ಬದುಕು ಭಿನ್ನವಾಗೇನೂ ಇರಲಿಲ್ಲ. ಆದರೆ ನಾನು ಬೆಳೆದದ್ದು ಮಾತ್ರ ಯಾವುದೇ ಒಂದು ಹಳ್ಳಿಯ ಬದುಕಿನಲ್ಲಿ ಬೇರೂರುತ್ತ ಅಲ್ಲ; ಹೀಗಾಗಿ ಒಂದು ನಿರ್ದಿಷ್ಟ ಊರು ಕೇರಿಯ ನೆನಪುಗಳು ನನ್ನಲ್ಲಿ ಮನೆಮಾಡಿಕೊಂಡಿಲ್ಲ. ಮೊದ ಮೊದಲು ಮಲೆನಾಡಿನ ಪರಿಸರದ ಹೊಳೆ–ಕಾಡು–ಬೆಟ್ಟಗಳೂ, ಅನಂತರ ಬಯಲುನಾಡಿನ ಹಳ್ಳ–ಕೆರೆ, ಹೊಲ–ಗದ್ದೆ–ತೋಟಗಳೂ ನನ್ನ ನೆನಪುಗಳಲ್ಲಿ ಹೆಣೆದುಕೊಂಡಿವೆ. ಆದರೆ ಯಾವ ಊರಿಗೆ ಹೋದರೂ ಬಡತನ ಮಾತ್ರ ಸಮಾನವಾದ ಲಕ್ಷಣವಾಗಿ ನನ್ನನ್ನು ಕಾಡಿದ ಸಂಗತಿಯಾಗಿದೆ. ಈ ಬಡತನದ ಹಿಂದೆ ಬದುಕನ್ನು ಹೇಗೋ ಹಿಡಿದು ನಡೆಸುವ ನಂಬಿಕೆಗಳೂ, ಆಚಾರ ವಿಚಾರಗಳೂ ತುಂಬ ವಿಸ್ಮಯಕಾರಿಯಾಗಿವೆ. ಜತೆಗೆ ನನ್ನ ನೆನಪಿನಲ್ಲಿ ಇಂದಿಗೂ ಅಚ್ಚೊತ್ತಿರುವ ಎರಡು ಚಿತ್ರಗಳೆಂದರೆ, ಕುಂಬಾರನ ಚಕ್ರ ಮತ್ತು ನೇಯ್ಗೆಯವರ ಮಗ್ಗ. ಕುಂಬಾರ ಕೇರಿಯಲ್ಲಿ ನಾನು, ಒಮ್ಮೊಮ್ಮೆ ಸ್ಕೂಲಿಗೆ ಹೋಗುವುದನ್ನೂ ಮರೆತು ಕುಂಬಾರನ ಚಕ್ರದ ಮಧ್ಯದ ಮಣ್ಣು ಕುಂಬಾರನ ಕೈ ಚಳಕದಿಂದ ವಿವಿಧ ಆಕಾರದ ಮಡಿಕೆ ಕುಡಿಕೆಗಳಾಗಿ ಮೈದೋರುವ ಪವಾಡವನ್ನು ನಿಬ್ಬೆರಗಾಗಿ ನಿಂತು ನೋಡುತಿದ್ದೆ. ಹಾಗೆಯೇ ದೇವಾಂಗದವರ ಮನೆಗಳಲ್ಲಿ, ಹಾಸಿಕೊಂಡ ಅಸಂಖ್ಯ ನೂಲುಗಳ ನಡುವೆ ನಿಯತ ಛಂದೋಗತಿಯಲ್ಲಿ ಆಡುವ ಲಾಳಿಯ ಸದ್ದಿನ ಮಧ್ಯ ಬಣ್ಣ ಬಣ್ಣದ ಬಟ್ಟೆಯೊಂದು ರೂಪುಗೊಳ್ಳುವ ಕ್ರಿಯೆಯೊ ನನಗೆ ಅತ್ಯಂತ ವಿಸ್ಮಯಕಾರಿಯಾದ ನೋಟವಾಗಿತ್ತು. ಈ ಎರಡೂ ಕವಿತೆಯ ಹುಟ್ಟನ್ನು ಕುರಿತು ನನಗೆ ಹಲವು ರಹಸ್ಯಗಳನ್ನು ತಿಳಿಸಿಕೊಟ್ಟಿವೆ, ಹಾಗೂ ನನ್ನ ಕವಿತೆಯಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಪ್ರತೀಕಗಳಾಗಿವೆ. ಇವುಗಳಂತೆಯೇ ಹಾಗೂ ನನ್ನ ಕವಿತೆಯೊಳಗೆ ಸೇರಿ ಕೊಂಡಿರುವ ಮತ್ತೊಂದು ಪ್ರತೀಕ ಹಣತೆಯದು. ಇದೂ ಕೂಡಾ ನನಗೆ ನಮ್ಮ ಗ್ರಾಮೀಣ ಪರಿಸರದ ಕೊಡುಗೆ. ನಾನು ನಾಗರಿಕ ಪರಿಸರದ ವಿದ್ಯುದ್ದೀಪಗಳ ನಡುವೆ ಬದುಕುತ್ತಿದ್ದರೂ, ನನ್ನ ಎಳೆಯಂದಿನ ಮಣ್ಣಿನ ಹಣತೆ ಇವೊತ್ತಿಗೂ ನನಗೆ ನೆಮ್ಮದಿಯ ಪ್ರಶಾಂತಿಯ ಹಾಗೂ ಪಾವಿತ್ರ್ಯದ ಸಂಕೇತವಾಗಿಯೇ ಉಳಿದಿದೆ. ನನ್ನ ಬಾಲ್ಯದ ಬದುಕನ್ನು ಸಮೃದ್ಧವಾಗಿ ತುಂಬಿಕೊಂಡು, ನಾನು ಬೆಳೆದ ನಿಸರ್ಗದ ವಿವಿಧತೆಯೇ, ಹೂವಿಗೆ, ಹಸುರಿಗೆ, ಹಕ್ಕಿಗೆ, ನೀರಿಗೆ, ಬೆಳಕಿಗೆ ನಾನು ಒಲಿದದ್ದು. ಬಹುಶಃ ಯಾವುದೋ ಒಳಗಿನ ಹಸಿವಿನಿಂದಲೇ ಅವರಿವರ ಪದವ ಓದಿ ನಾನು ನಿಸರ್ಗವನ್ನು ಪ್ರೀತಿಸುವುದು ಹೇಗೆಂಬುದನ್ನು ಕಲಿಯಲಿಲ್ಲ. ನಿಸರ್ಗವನ್ನು ಕುರಿತು ದೊಡ್ಡ ದೊಡ್ಡ ಕವಿಗಳು ಬರೆದ ಪದ್ಯಗಳನ್ನು

ಮುಂದೆ ನಾನು ಓದಿದ ಮೇಲೆ ನಿಸರ್ಗವನ್ನು ಕುರಿತ ಬೇರೆ ಬೇರೆಯ ನಿಲುವುಗಳು ನನಗೆ ಪರಿಚಯವಾದುವು, ಅಷ್ಟೆ. ನನ್ನೊಳಗಿನ ಬೆರಗಿನ ಕಣ್ಣು ಎಳೆಯಂದಿನಲ್ಲಿ ತಾನಾಗಿಯೇ ತೆರೆದದ್ದಕ್ಕೆ ಕಾರಣ, ಈ ಲೋಕದ ಪ್ರಕೃತಿ ವೈವಿಧ್ಯತೆಯೇ. 'ನೋಡು ಇದೊ ಇಲ್ಲರಳಿ ನಗುತಿದೆ ಏಳು ಸುತ್ತಿನ ಮಲ್ಲಿಗೆ! ಇಷ್ಟು ಹಚ್ಚನೆ ಹಸುರಗಿಡದಿಂದೆಂತು ಮೂಡಿತೊ ಬೆಳ್ಳಿಗೆ! ಎಂಬಂಥ ವಿಸ್ಮಯೋದ್ಗಾರಗಳೂ, ಇದರ ಪರಿಣಾಮವೇ. ನಮ್ಮಲ್ಲಿ ಬಂತಲ್ಲ ನವ್ಯಕಾವ್ಯ ಎಂಬ ಚಳುವಳಿ, ಆಗ, ಹೀಗೆ ಹೂವನ್ನು ಕುರಿತು ಬರೆಯುವುದೂ ಒಂದು ಕಾವ್ಯಾಪರಾಧವಾಗಿ ಪರಿಣಮಿಸಿ ಬಿಟ್ಟಿತ್ತು! ಸೂರ್ಯ ಚಂದ್ರ ಹೂವು ಚಿಕ್ಕೆ ಎಲ್ಲಾ ಗಡೀಪಾರಾಗಿ ಬಿಟ್ಟವು! ನನಗನ್ನಿಸುತ್ತದೆ, ಒಂದು ಹೂವನ್ನು, ಒಂದು ಹಕ್ಕಿಯನ್ನು, ಒಂದು ಮರವನ್ನು ಪ್ರೀತಿಸಲಾರದವನು ಮನುಷ್ಯರನ್ನು ಅವರನ್ನೊಳಗೊಂಡ ಸಮಾಜವನ್ನು ಪ್ರೀತಿಸಿಯಾನು ಹೇಗೆ? ನಿಜವಾಗಿ ನೋಡಿದರೆ, ಕವಿತೆ ಹುಟ್ಟುವುದೇ ಅದಮ್ಯವಾದ ಜೀವನಪ್ರೀತಿಯಿಂದ. ನಮ್ಮ ಬದುಕಿನ ಒಂದು ಭಾಗವಾಗಿರುವ ನಿಸರ್ಗವನ್ನು ಪ್ರೀತಿಸುವುದನ್ನು ಕಲಿಸುವ ಕಾವ್ಯ, ವಾಸ್ತವವಾಗಿ ಈ ಜಗತ್ತಿನೊಂದಿಗೆ ನಮ್ಮ ಸಂಬಂಧವನ್ನು ವಿಸ್ತರಿಸುತ್ತದೆ. ಕಾವ್ಯ ಅನ್ನುವುದು ಮೂಲಭೂತವಾಗಿ, ಕವಿಯಾದವನು ಈ ಲೋಕದೊಂದಿಗೆ ಪ್ರೀತಿಪೂರ್ವಕವಾಗಿ ಸಾಧಿಸಿಕೊಳ್ಳುವ ತನ್ಮಯತೆ ಹಾಗೂ ಅದರ ಪರಿಣಾಮವಾದ ಪ್ರಜ್ಞೆಯ ವಿಸ್ತರಣೆ ಎನ್ನಬಹುದು. ಇತ್ತೀಚಿನ ನನ್ನ ಕವಿತೆಯೊಂದರಲ್ಲಿ ಈ ಚಿಂತನೆಯೇ ಅಭಿವ್ಯಕ್ತವಾಗಿದೆ.

ಪ್ರೀತಿ ಇಲ್ಲದ ಮೇಲೆ
ಹೂವು ಅರಳೀತು ಹೇಗೆ?
ಮೋಡ ಕಟ್ಟೀತು ಹೇಗೆ?
ಹನಿಯೊಡೆದು ಕೆಳಗಿಳಿದು
ನೆಲಕ್ಕೆ ಹಸಿರು ಮೂಡೀತು ಹೇಗೆ?

ಕಾವ್ಯ ಅದು ಪ್ರಾಚೀನವಾಗಲಿ, ನವೀನವಾಗಲಿ, ನವ್ಯವಾಗಲಿ, ಬಂಡಾಯವಾಗಲಿ, ಮೂಡತಕ್ಕದ್ದು ಬದುಕಿನ ಬಗ್ಗೆ ಗಾಢವಾದ ಪ್ರೀತಿಯಿಂದಲೆ. ಈ ದೃಷ್ಟಿಯಿಂದ ನನಗೆ ಸಾಮಾಜಿಕ ಬದುಕು ಎಷ್ಟು ಮುಖ್ಯವೋ, ಅದನ್ನು ಸುತ್ತಿ ಮುತ್ತಿಕೊಂಡಿರುವ ನಿಸರ್ಗದ ಬದುಕು ಅಷ್ಟೇ ಮುಖ್ಯ. ಅದರಿಂದಲೇ ಈ ನಿಸರ್ಗ ರಮ್ಯತೆ ಚೈತ್ರಮಾಸದ ಮೂಲಕ ಪಡೆದು ಕೊಳ್ಳುವ ನವನವೋನ್ಮೇಷ ಶಾಲಿಯಾದ ಉತ್ಕರ್ಷ ನನಗೆ ಸದಾ ಚೇತೋಹಾರಿಯಾಗಿದೆ. ಅದರಿಂದಲೇ ಏನೋ ಚೈತ್ರ

ಋತುವನ್ನು ಕುರಿತು ಪ್ರತ್ಯೇಕವಾಗಿ ಪರಿಶೀಲಿಸುವಷ್ಟು ಅಧಿಕ ಸಂಖ್ಯೆಯ ಪದ್ಯಗಳು ನನ್ನಲ್ಲಿವೆ. ಬಹುಶಃ ಇದು ನನ್ನ ಕಾವ್ಯನಿರ್ಮಿತಿಯ ಒಂದು ವಿಶೇಷತೆ ಕೂಡಾ. 'ಚೈತ್ರ' ನನಗೆ ನಿಸರ್ಗದ ಸಮೃದ್ಧ ಸೃಜನ ಶೀಲತೆಗೆ ಒಂದು ಪ್ರತೀಕವಾಗಿದೆ. ಯಾರಲ್ಲಿ ಈ ಚೈತ್ರದ ಅಂಶ ಸಾಕಷ್ಟು ಪ್ರಮಾಣದಲ್ಲಿ ಇಲ್ಲವೋ ಆತ ಕವಿಯೇ ಆಗಲಾರ. ಆನಂದವರ್ಧನ ಹೇಳುತ್ತಾನೆ, ಅದೇ ಸುಪರಿಚಿತವಾದ ಸಂಗತಿಗಳು ಕವಿಯ ಪ್ರತಿಭಾಸ್ಪರ್ಶದಿಂದ ಮಧುಮಾಸದ ಮರಗಳಂತೆ ನವನವೀನವಾಗಿ ಬಿಡುತ್ತವೆ ಎಂದು.

ನಾನು ಬರೆಯಲು ಪ್ರಾರಂಭಿಸಿದಾಗ ನವೋದಯದ ಚೈತ್ರ ಮಾಸ. 'ನೂರು ಮರ ನೂರು ಸ್ವರ, ಒಂದೊಂದು ಅತಿ ಮಧುರ'ಎಂಬಂಥ ಉತ್ಸಾಹದ ಕಾಲ. ಅತ್ತ ಬೇಂದ್ರೆ ಇತ್ತ ಕುವೆಂಪು ತಮ್ಮ ಸಮೃದ್ಧಿಯ ಛಾಯೆಯನ್ನು ಚೆಲ್ಲಿದ್ದರು — ಇಡೀ ಕನ್ನಡ ನಾಡಿನ ಮೇಲೆ ನಾನು ಬಂದದು ಕುವೆಂಪು ಅವರ ನೆರಳಿನ ಕೆಳಗೆ. ನಾನು ಅವರ ಸಾಕ್ಷಾತ್ ಶಿಷ್ಯ. ಮಹಾರಾಜಾ ಕಾಲೇಜಿನಲ್ಲಿ ನಿರಂತರವಾಗಿ ಐದು ವರ್ಷಗಳ ಕಾಲ. ಹೀಗಾಗಿ ನನ್ನ ಕವಿತೆಗೂ ಅವರದೇ ಬಣ್ಣ, ಅವರದೇ ರೀತಿಯ ನೋಟ, ರಚನೆ, ಬಂಧ ಎಲ್ಲಾ. ನನ್ನ ಮೊದಲ ಸಂಕಲನ 'ಸಾಮಗಾನ'ವನ್ನು ನೋಡಿದರೆ ಸಾಕು. ಆದರೆ ನನ್ನ ಮೇಲೆ ಸಹಜವಾಗಿಯೇ ಅವರ ಗಾಢವಾದ ಪ್ರಭಾವವಿದ್ದಿತಾದರೂ, ನನ್ನ ಕವಿತೆ ಕೇವಲ ಅವರ ಅನುಕರಣೆಯಾಗಿರಲಿಲ್ಲ ಅನ್ನುವುದೂ, ನನ್ನದೇ ಆದ ಬೇರೆಯ ತುಡಿತಗಳಿದ್ದವು ಅನ್ನುವುದನ್ನು ಅದೇ ಕವನ ಸಂಗ್ರಹದ ಕೆಲವು ಕವಿತೆಗಳು ತೋರಿಸಿ ಕೊಡುತ್ತವೆ. ಭಾಷೆಯ ಹಾಗೂ ರಚನೆಯ ದೃಷ್ಟಿಯಿಂದ ಗಾಢವಾಗಿ ಅವರ ಪ್ರಭಾವಗಳಿದ್ದರೂ, ನಿಸರ್ಗಪರ ಕವಿತೆಗಳಲ್ಲಿ ಒಂದು ಬಗೆಯ ವಾಸ್ತವವಾದೀ ನಿಲುವು ನನ್ನಲ್ಲಿ ರೂಪುಗೊಳ್ಳುತ್ತಿತ್ತು ಎಂಬುದಕ್ಕೆ ನನ್ನ ಮೊದಲ ಕವನ ಸಂಗ್ರಹದಲ್ಲಿಯೇ ಸಾಕಷ್ಟು ಸೂಚನೆಗಳಿವೆ. ಆದರೆ ಸ್ವಲ್ಪ ಕಾಲದಲ್ಲಿಯೇ ನನ್ನ ಕವಿತೆ ಅವರ ಪ್ರಭಾವದ ಗೆರೆಯಾಚೆ ನಿಂತು ಮುಂದೇನು ಎನ್ನುತ್ತಿತ್ತು. ನೋಡಿದರೆ ಮುಂದೆ ಚಂಡೆ ಮದ್ದಳೆಯ ದನಿಯೊಂದಿಗೆ ನವ್ಯಕಾವ್ಯ ಚಳುವಳಿ ರೂಪುಗೊಳ್ಳುತ್ತಿತ್ತು. ಕಾವ್ಯದಲ್ಲಿ ಬದಲಾವಣೆಯೊಂದು ಅತ್ಯಗತ್ಯವಾಗಿದೆ ಎನ್ನುವುದನ್ನು ಈ ಚಳುವಳಿ ಸಕಾರಣವಾಗಿ ಪ್ರತಿಪಾದಿಸುತ್ತಿದ್ದರೂ, ನವೋದಯ ಸಾಹಿತ್ಯ ಸಂದರ್ಭದ ಕೊನೆಯ ಹಂತದಲ್ಲಿ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದ್ದ ಮತ್ತು ಕುವೆಂಪು ಬೇಂದ್ರೆ ಮೊದಲಾದವರ ಕಾವ್ಯಸಾಧನೆಯ ಮಹತ್ತಿಗೆ ಒಲಿದಿದ್ದ ಹಾಗೂ ಕನ್ನಡ ಸಾಹಿತ್ಯ ಪರಂಪರೆಯ ಸತ್ವವನ್ನು ಸಮರ್ಥ ಪ್ರಾಧ್ಯಾಪಕರ ಮೂಲಕ ಪರಿಚಯ ಮಾಡಿಕೊಂಡಿದ್ದ ನನಗೆ, ನವ್ಯಸಾಹಿತ್ಯ ಚಳುವಳಿಯ ವಕ್ತಾರರು ಉದ್ಘೋಷಿಸುತ್ತಿದ್ದ ಪರಂಪರೆಯ ನಿರಾಕರಣೆಯ ಮಾತುಗಳಾಗಲೀ ತಮ್ಮ ಸಮಕಾಲೀನರೂ,

ಹಿರಿಯರೂ ಆದ ಸಾಹಿತಿಗಳ ಬಗ್ಗೆ ಆಡಲಾಗುತ್ತಿದ್ದ ತಿರಸ್ಕಾರದ ಹಾಗೂ ಹಗುರವಾದ ಮಾತುಗಳಾಗಲೀ ನನಗೆ ಅಷ್ಟಾಗಿ ರುಚಿಸಲಿಲ್ಲ. ಹೀಗಾಗಿ ನಾನು ನನ್ನ ಪಾಡಿಗೆ ನಿಂತು ನನ್ನನ್ನು ಕಂಡುಕೊಳ್ಳುವ ಹಾಗೂ ರೂಪಿಸಿಕೊಳ್ಳುವ ದಾರಿ ಯಾವುದು ಎಂದು ಯೋಚಿಸುತ್ತಿದ್ದೆನೆಂದು ತೋರುತ್ತದೆ. ಈ ಪರಿಸರದಲ್ಲಿ ಪ್ರಕಟವಾದ ನನ್ನ 'ಚೆಲುವೆ-ಒಲವು' ಸಂಗ್ರಹ ಸಹಜವಾಗಿಯೇ ನನ್ನ ಸಾಂಸಾರಿಕ ಬದುಕಿನ ಹಲವು ಮುಖಗಳನ್ನೂ ಅದರ ಸುತ್ತಣ ಚೆಲುವನ್ನು ಕುರಿತದ್ದಾಗಿತ್ತು. ಒಂದು ಸ್ವಾರಸ್ಯದ ಸಂಗತಿ ಎಂದರೆ ಈ ಹೊತ್ತಿನ ಭಾಷೆ, ಎರಡು ವರ್ಷಗಳ ಹಿಂದೆ ಪ್ರಕಟವಾದ ನನ್ನ ಮೊದಲ ಸಂಗ್ರಹದ ಕವಿತೆಗಳ ಭಾಷಾವಿನ್ಯಾಸಕ್ಕಿಂತ ಬೇರೆಯಾದ ಹಾಗೂ ಬೇರೆಯಾಗುತ್ತಿರುವ ಲಕ್ಷಣವನ್ನು ಪಡೆದುಕೊಳ್ಳತೊಡಗಿತ್ತು. ನಿಯತಬಂಧಗಳು ಮುಕ್ತಛಂದೋರೂಪಗಳಾಗಿ ಮಾರ್ಪಾಡಾಗತೊಡಗಿದ್ದವು. ಈ ಬದಲಾವಣೆಗೆ ಕಾರಣ, ಅವತ್ತಿನ ನವ್ಯಕಾವ್ಯದ ಧೋರಣೆಗಳೂ, ಪ್ರಯೋಗಗಳು ಎಂದೇ ಹೇಳಬೇಕು. ಒಂದು ಸ್ವಾರಸ್ಯದ ಸಂಗತಿ ಎಂದರೆ, 'ಕಾಲ ಮತ್ತು ಮನುಷ್ಯ' ಈ ಸಂಬಂಧವನ್ನು ಕುರಿತ ವಸ್ತುವೊಂದು ಮೊದಲು ಕಾಣಿಸಿಕೊಂಡದ್ದು ಈ ಸಂದರ್ಭದಲ್ಲಿಯೇ. 'ಚೆಲುವು-ಒಲವು' ಸಂಗ್ರಹದ(೧೯೫೩)ಲ್ಲಿನ ಭಗ್ನಚೆಲುವೆ ಎಂಬ ಕವಿತೆಯೊಂದರಲ್ಲಿ ಕಾಣಿಸಿಕೊಂಡ ಈ ಚಿಂತನೆ ಮುಂದೆ ೧೯೫೯ರ ವೇಳೆಗೆ ಪ್ರಕಟಗೊಂಡ 'ದೀಪದ ಹೆಜ್ಜೆ' ಸಂಗ್ರಹದ ಮುಖ್ಯ ತಾತ್ವಿಕ ಚಿಂತನೆಯಾಗಿ ನೆಲೆಗೊಂಡಿದೆ. ತನ್ನ ವಯಸ್ಸನ್ನು ಮರೆಮಾಡಲು ಅಥವಾ ತಾನು ಸಾಕಷ್ಟು ಎಳೆಯವಳಾಗಿ ಕಾಣಲು ಹೆಣ್ಣೊಬ್ಬಳು ವಿವಿಧ ಶೃಂಗಾರ ಸಾಧನಗಳ ಮೂಲಕ ನಡೆಸುವ ವ್ಯರ್ಥ ಪ್ರಯತ್ನ, ನನಗೆ ಕಾಲವನ್ನು ಕುರಿತು ಮನುಷ್ಯನಿಗೆ ಇರುವ ಭಯದ ಮತ್ತು ಕಾಲದ ಉಪಹತಿಯಿಂದ ಪಾರಾಗುವ ಅಥವಾ ಅದನ್ನು ಮೀರುವ ಬಯಕೆಯ ಪ್ರತೀಕವಾಗಿ ತೋರುತ್ತದೆ. ಈ ಸಂಗತಿಯನ್ನು 'ಭಗ್ನ ಚಲುವೆ' ಎಂಬ ಪದ್ಯದಲ್ಲಿ ನಾನು ಹಿಡಿದಿರಿಸಿದ್ದೇನೆ. ಇದೇ ವಸ್ತುವನ್ನೇ ಮುಖ್ಯವಾಗಿ ಉಳ್ಳ ಸಂಗ್ರಹ 'ದೀಪದ ಹೆಜ್ಜೆ'. ಕಾಲ ಮತ್ತು ಮನುಷ್ಯನ ಮುಖಾಮುಖಿಯೇ ಅಲ್ಲಿನ ಪ್ರಧಾನ ಚಿಂತನೆಯಾಗಿದೆ. ಇದಕ್ಕೂ ಮೊದಲಿನ ದೇವಶಿಲ್ಪ (೧೯೫೭) ಮತ್ತು ಮುಂದಿನ ಕಾರ್ತೀಕ (೧೯೬೧) ಸಂಗ್ರಹಗಳಲ್ಲಿ, ಮೊದಲ ಕವನ ಸಂಗ್ರಹ ಸಾಮಗಾನ(೧೯೫೧)ದಲ್ಲಿ ಕಾಣಿಸಿಕೊಂಡ ಹಲವು ಅನುಭಾವಿಕ ಹೊಳಹುಗಳು ಹರಡಿಕೊಂಡಿವೆ. ೧೯೫೧ರಿಂದ ೧೯೬೭ ('ಸಾಮಗಾನ'ದಿಂದ 'ತೆರೆದ ದಾರಿ'ಯ ವರೆಗೆ) ಈ ಹದಿನೈದು ವರ್ಷಗಳ ಕಾಲಮಾನದಲ್ಲಿ ಒಟ್ಟು ಏಳು ಕವನ ಸಂಗ್ರಹಗಳು ಪ್ರಕಟವಾಗಿವೆ ಎಂಬುದನ್ನು ನೋಡಿದರೆ ನವ್ಯಕಾವ್ಯ ಸಂದರ್ಭಕ್ಕೆ ಸಮಾನಾಂತರವಾಗಿ ಅದರಿಂದಾಚೆಗೆ ನಿಂತು ಯಾವ ಹೊಯ್ದಾಟವೂ ಇಲ್ಲದೆ ನನ್ನ ಪಾಡಿಗೆ ನಾನು ಅವತ್ತಿನ ವಿಮರ್ಶಕರ ಅವಜ್ಞೆಗೆ ಗುರಿಯಾದರೂ ಬರೆದುಕೊಂಡು ಬಂದಿದ್ದೇನೆ,

ಮತ್ತು ಈ ಸಂಗ್ರಹಗಳು ಹಲವಾರು ಮರು ಮುದ್ರಣಗಳಿಗೆ ಒಳಗಾಗುತ್ತ ಬಂದಿರುವುದು ಸಹಜ, ಕನ್ನಡ ಕಾವ್ಯದ ಸಹೃದಯರು ನನ್ನ ಕವಿತೆಯನ್ನು ಪ್ರೀತಿಯಿಂದ ಒಪ್ಪಿಕೊಂಡಿದ್ದಾರೆ, ಎನ್ನುವುದಕ್ಕೆ ಸಾಕ್ಷಿಯಾಗಿದೆ. ಇದು ನನಗೆ ಒಂದು ರೀತಿಯಲ್ಲಿ ಧೈರ್ಯದ ಸಂಗತಿ ಕೂಡ. ಹಾಗೆ ನೋಡಿದರೆ ಓದುಗರ ನಿರಂತರ ಸಂವಾದ ಹಾಗೂ ಪ್ರತಿಕ್ರಿಯೆಗಳೇ ನನ್ನ ಕವಿತೆಯ ಬಗೆಗೆ ಬಹುಶಃ ನಿಜವಾದ ವಿಮರ್ಶೆಯಾಗಿರುವಂತೆ ತೋರುತ್ತದೆ.

ನನ್ನ ಕಾವ್ಯದ ಕೇಂದ್ರ ಕಾಳಜಿ ಮನುಷ್ಯ, ದೇವರಲ್ಲ. ದೂರದ ಆದರ್ಶಗಳನ್ನು ಕುರಿತು, ಆಧ್ಯಾತ್ಮವನ್ನು ಕುರಿತು ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾ ದಿನ ದಿನದ ಸರಳ ಸಾಧಾರಣದ ಬದುಕಿಗೆ ಅವಮಾನ ಮಾಡುವವರನ್ನು ಕಂಡರೆ ನನಗೆ ಆಗುವುದಿಲ್ಲ. ಹಾಗೆಯೆ ಒಂದು ಕಡೆ ಧರ್ಮ ಮತ್ತೊಂದು ಕಡೆ ರಾಜಕೀಯ ಈ ದೇಶದ ಅನಕ್ಷರಸ್ಥ ಹಾಗೂ ಮುಗ್ಧ ಜನತೆಯನ್ನು ಹೇಗೆ ಶೋಷಿಸುತ್ತಿವೆ ಎಂಬುದು ನನ್ನನ್ನು ಗಾಢವಾಗಿ ಕಲಕುವ ಸಂಗತಿಯಾಗಿದೆ. ಕ್ಷುದ್ರ ರಾಜಕೀಯ, ಸಮಯ ಸಾಧಕತನದಿಂದ ಯೋಗ್ಯತೆಯನ್ನು ಇಕ್ಕಿ ಮೆಟ್ಟುವ, ಜನ ಜನದ ನಡುವೆ ಜಾತಿ, ಮತ, ಭಾಷೆ, ವರ್ಣಗಳ ಗೋಡೆಗಳನ್ನು ಎಬ್ಬಿಸುತ್ತಾ ಸಂಬಂಧಗಳನ್ನೇ ಮುರಿಯುವ ಪಟ್ಟಭದ್ರಹಿತಾಸಕ್ತಿಗಳನ್ನು ಕಂಡು ನೊಂದಿದ್ದೇನೆ. ದಿನದಿಂದ ದಿನಕ್ಕೆ ಈ ಯಂತ್ರನಾಗರಿಕ ಜಗತ್ತಿನ ಮಧ್ಯೆ ಮನುಷ್ಯ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಿದ್ದಾನೆ. ನಾನಾ ವಿಚ್ಛಿದ್ರಕಾರಕ ಶಕ್ತಿಗಳ ನಡುವೆ ಮನುಷ್ಯ ಚೂರು ಚೂರಾಗುತ್ತಿದ್ದಾನೆ. ಹೇಗೆ ಈ ಪರಿಸರದ ಮಧ್ಯೆ ನಿಜವಾದ ಮೌಲ್ಯಗಳನ್ನು ಉಳಿಸುವುದು ? ಹೇಗೆ ಎದೆ ಎದೆಗಳ ನಡುವಣ ಕಂದರಗಳಿಗೆ ಸೇತುವೆಗಳನ್ನು ನಿರ್ಮಿಸಿ ಹೃದಯಗಳನ್ನು ಬೆಸೆಯುವುದು ?– ಇತ್ಯಾದಿ ಚಿಂತನೆಗಳು ಮುಖ್ಯವಾಗಿ ೧೯೬೨ ರ ನಂತರದ ನನ್ನ ಕವಿತೆಗಳ ಮೂಲದ್ರವ್ಯವಾಗಿವೆ. ಈ ಚಿಂತನೆಗಳು ಆಗಾಗ ವಿಡಂಬನೆಯ ವಿಧಾನದಲ್ಲಿ ಅಭಿವ್ಯಕ್ತವಾಗಿವೆ ಮತ್ತು ಅದರಿಂದ ಭಿನ್ನವಾದ ಪ್ರತೀಕ ಮಾರ್ಗದಲ್ಲಿಯೂ ಅಭಿವ್ಯಕ್ತವಾಗಿವೆ. ಮೂಲಭೂತವಾಗಿ ಇವು ಮಾನವೀಯ ಕಾಳಜಿಗಳನ್ನುಳ್ಳ ಸಮಾಜಮುಖೀ ವಾಸ್ತವವಾದೀ ನಿಲುವುಗಳು.

ಕಾವ್ಯದ ಜತೆಗೆ ಸಾಹಿತ್ಯವಿಮರ್ಶೆ ಮತ್ತು ಕಾವ್ಯಮೀಮಾಂಸೆ ನನ್ನ ಆಸಕ್ತಿಯ ವಿಷಯಗಳು. ನಾನು ಉದ್ದಕ್ಕೂ ವಿಶ್ವವಿದ್ಯಾಲಯದಲ್ಲಿ ಪ್ರಧ್ಯಾಪಕನಾದುದರಿಂದ ಸಾಹಿತ್ಯವನ್ನು ಕುರಿತು ಪಾಠ ಹೇಳಬೇಕಾದ ಅನಿವಾರ್ಯತೆಗೆ ಒಳಗಾದುದರಿಂದ, ನನಗೆ ಕನ್ನಡ ಸಾಹಿತ್ಯ ಪರಂಪರೆಯ ಪರಿಚಯವಾದುದು, ಮಾತ್ರವಲ್ಲ, ಸಾಹಿತ್ಯದ ಹಿಂದಿನ ಸೃಜನವ್ಯಾಪಾರವನ್ನು ಕುರಿತು ವಿಚಾರ ಮಾಡಲೂ ಅವಕಾಶ

ದೊರೆತಂತಾಯಿತು. ಜತೆಗೆ ನಾನೂ ಕವಿತೆ ಬರೆಯುವಾಗ, ಒಂದು ಶ್ರೀಮಂತವಾದ ಸಾಹಿತ್ಯಪರಂಪರೆಯ ಸಂದರ್ಭದಲ್ಲಿ ನಾನು ಕೆಲಸ ಮಾಡುತ್ತಿದ್ದೇನೆ ಎಂಬ ಅರಿವು ನನಗೆ ಯಾವಾಗಲೂ ಉಳಿದಿದೆ. ಇದರ ಪರಿಣಾಮವೆಂದರೆ ಒಂದೆಡೆ ನಾನು ಸಾಹಿತ್ಯತತ್ತ್ವ ಹಾಗೂ ಸಾಹಿತ್ಯವಿಮರ್ಶೆಯಲ್ಲಿ ತೊಡಗಿಸಿಕೊಂಡಂತೆ, ಮತ್ತೊಂದೆಡೆ ಕಾವ್ಯನಿರ್ಮಿತಿಯನ್ನು ಕುರಿತು, ಕವನರೂಪದಲ್ಲೂ ಸಾಕಷ್ಟು ಅಭಿವ್ಯಕ್ತಿಯನ್ನು ನೀಡಿದ್ದೇನೆ. ಕವಿತೆಯ ಹುಟ್ಟನ್ನು ಕುರಿತು, ಸ್ವರೂಪವನ್ನು ಕುರಿತು, ಉದ್ದೇಶವನ್ನು ಕುರಿತು ನನ್ನಲ್ಲಿ ಬಹು ಸಂಖ್ಯೆಯ ಪದ್ಯಗಳು ದೊರೆಯುತ್ತವೆ. ಬಹುಶಃ ನನ್ನೊಳಗಿನ ಸೃಜನಶೀಲತೆಯನ್ನು ಆಗಾಗ ಚಾಲನಗೊಳಿಸಿಕೊಳ್ಳಲು, ಈ ಕವಿತೆಗಳ ನಿರ್ಮಿತಿ ಒಂದು ಬಗೆಯ ತಂತ್ರವೂ ಆಗಿ ಪರಿಣಮಿಸಿವೆಯೋ ಏನೋ. 'ಕಾವ್ಯ'ವನ್ನು ಕುರಿತ ಈ ಎಲ್ಲ ಕವಿತೆಗಳನ್ನು ಒಟ್ಟಾಗಿ ಇರಿಸಿಕೊಂಡು ನೋಡಿದರೆ ಕಾವ್ಯವನ್ನು ಕುರಿತ ನನ್ನ ನಿಲುವು ಏನು ಎಂಬುದು ಸ್ಪಷ್ಟವಾದೀತು. ಈ ಹಿನ್ನೆಲೆಯಲ್ಲಿ 'ನನ್ನ ಹಣತೆ' ಎಂಬ ಕವಿತೆಯೊಂದರ ಸಾಲುಗಳನ್ನು ಉಲ್ಲೇಖಿಸುತ್ತೇನೆ.

ಹಣತೆ ಹಚ್ಚುತ್ತೇನೆ ನಾನೂ,
ಈ ಕತ್ತಲನು ಗೆದ್ದು ನಿಲ್ಲುತ್ತೇನೆಂಬ ಜಿದ್ದಿನಿಂದಲ್ಲ;
ಲೆಕ್ಕವೇ ಇರದ ದೀಪಾವಳಿಯ ಹಡಗುಗಳೆ
ಇದರಲ್ಲಿ ಮುಳುಗಿ ಕರಗಿರುವಾಗಿ
ನಾನೂ ಹಚ್ಚುವ ಹಣತೆ ಶಾಶ್ವತವೆಂಬ ಭ್ರಾಂತಿ ನನಗಿಲ್ಲ.
... ... ... ... ... ...
... ... ... ... ... ...
ಆದರೂ ಹಣತೆ ಹಚ್ಚುತ್ತೇನೆ ನಾನೂ;
ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ,
ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು,
ನೋಡಬಹುದೆಂಬ ಒಂದೇ ಒಂದು ಆಸೆಯಿಂದ;
ಹಣತೆ ಆರಿದ ಮೇಲೆ, ನೀನು ಯಾರೋ, ಮತ್ತೆ
ನಾನು ಯಾರೋ.

ಈ ಕವಿತೆ ನನ್ನ ಕಾವ್ಯ ಹಾಗೂ ಕಾವ್ಯೋದ್ದೇಶವನ್ನು ಕುರಿತು ಹೇಳಬೇಕಾದ್ದೆಲ್ಲವನ್ನೂ ಹೇಳುತ್ತದೆ.

— ● —

# ನಾನು ಮತ್ತು ನನ್ನ ಕಾವ್ಯ

ಚೆನ್ನವೀರ ಕಣವಿ

ಮುಂಡರಗಿಯಂತಹ ಪಡಿಮೂಲೆಯ ಸ್ಥಳದಲ್ಲಿ ಕಾವ್ಯವನ್ನು ಕುರಿತು ಒಂದು ಹೊಸ ಬಗೆಯ ವಿಚಾರ ಸಂಕಿರಣವನ್ನೇರ್ಪಡಿಸಿ, ಇಲ್ಲಿಯ ಅಭ್ಯಾಸಿಗಳಿಗೆ, ಕಾವ್ಯ ಪ್ರೇಮಿಗಳಿಗೆ ಒಂದು ಅಪೂರ್ವವಾದ ಅವಕಾಶ ಒದಗಿಸಿರುವ ಈ ಕಾಲೇಜಿನ ಕರ್ನಾಟಕ ಸಂಘಕ್ಕೆ ಮೊಟ್ಟ ಮೊದಲು ಅಭಿನಂದನೆಗಳು ಸಲ್ಲಬೇಕು.

ಈ ಎರಡು ದಿನ ನಮ್ಮಿಬ್ಬರ ಕಾವ್ಯದ ಬಗ್ಗೆ ಆರು ಭಾಷಣಗಳನ್ನು ಕೇಳಿದ್ದೀರಿ. ಆಮೇಲೆ ಚರ್ಚೆಯೂ ನಡೆಯಿತೆಂದು ಕೇಳಿದೆ. ಅವರೆಲ್ಲ ಏನು ಹೇಳಿದರು ಎಂಬುದು ನಮಗೆ ಗೊತ್ತಿಲ್ಲ, ಆದರೆ ನಿಮಗೆ ಗೊತ್ತಿದೆ. ಯಾಕೆಂದರೆ, ನೀವೆಲ್ಲರೂ ಅದರಲ್ಲಿ ಸಕ್ರಿಯವಾಗಿ ಪಾಲುಗೊಂಡವರು. ಇವತ್ತಿನ ಸಂದರ್ಭದಲ್ಲಿ ಅದು ನಮಗೆ ಗೊತ್ತಿರಬೇಕಾದ ಕಾರಣವೂ ಇಲ್ಲ. 'ನಾನು ಮತ್ತು ನನ್ನ ಕಾವ್ಯ' ಅನ್ನೋದು ಬಹುತೇಕ ನಮಗೆ ವೈಯಕ್ತಿಕವಾಗಿ ಸಂಬಂಧಪಟ್ಟದ್ದು,

ಗೆಳೆಯ ಶಿವರುದ್ರಪ್ಪನವರು ತಮ್ಮ ಭಾಷಣದಲ್ಲಿ ಈಗಾಗಲೇ ಕೆಲವು ಮಾತು ಗಳನ್ನು ಹೇಳಿದ್ದಾರೆ. ನನ್ನ ಅನುಭವವೂ ಅದಕ್ಕಿಂತ ಬಹಳ ಭಿನ್ನ ಎಂದು ಅನ್ನಿಸುವದಿಲ್ಲ. ಆದರೂ ಪ್ರತಿಯೊಬ್ಬರಿಗೂ ಅವರವೇ ಆದ ಅನುಭವ ಕಾವ್ಯ ಬರವಣಿಗೆಯ ರೀತಿ ಇದ್ದೇ ಇರುತ್ತವೆ. ಅವರು ಮಾತನಾಡುತ್ತ, ಸಂದರ್ಭಾನುಸಾರ ತಮ್ಮ ಕವಿತೆಗಳನ್ನು ಉದಾಹರಿಸುತ್ತ ಹೋದರು. ನಾನು ಮಾತನಾಡುವದನ್ನೆಲ್ಲ ಮುಗಿಸಿಬಿಟ್ಟು ಕೊನೆಯಲ್ಲಿ ಕೆಲವು ಕವಿತೆಗಳನ್ನು ಓದಿ ತೋರಿಸಬೇಕೆಂದಿದ್ದೇನೆ.

ಕಳೆದ ಎರಡು ದಿನ ವಿಮರ್ಶಕ ಮಿತ್ರರು ಯಾವ ಕಾವ್ಯವನ್ನು ಕುರಿತು ವಿವೇಚಿಸಿದರೊ ಅದನ್ನು ಬರೆದ 'ನಾನು', ನನ್ನ ವ್ಯಕ್ತಿತ್ವ ರೂಪುಗೊಂಡ ಬಗೆ, ಈ ಕಾವ್ಯಸೃಷ್ಟಿಗೆ ಹಿನ್ನೆಲೆಯಾಗಿರುವ ರೀತಿಯ ಪರಿಚಯದ ನಾಲ್ಕು ಮಾತು ನಾನೀಗ ಹೇಳಬೇಕಾದ್ದು. ಅದು ಅಷ್ಟು ಸುಲಭವೇನೂ ಅಲ್ಲ. ಸಮಗ್ರವಾಗಿ ನಿರೂಪಿಸುವದಂತೂ ಸಾಧ್ಯವೇ ಇಲ್ಲ. ಸಾಧ್ಯವಿದ್ದಷ್ಟು ಸುಳುಹುಗಾಣಿಸಲು ಪ್ರಯತ್ನಿಸುತ್ತೇನೆ.

ನಾನೂ ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದವನು. ನನ್ನ ತಂದೆ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. ೫೦-೬೦ ವರ್ಷಗಳ ಹಿಂದಿನ ಹಳ್ಳಿಯ ಪರಿಸರದಲ್ಲಿ ತೀವ್ರ ಸ್ಪಂದನಕ್ಕೊಳಗಾಗಿ ಬಾಲ್ಯವನ್ನು ಕಳೆದವನು. ಊರನ್ನು ಆವರಿಸಿದ ಕಪ್ಪತಗುಡ್ಡದ ಸಾಲು, ಎಲೆವಳ್ಳಿ ತೋಟಗಳು, ಬಯಲು ಸೀಮೆಯ ಹಸಿರು ಹೊಲಗಳು, ಎತ್ತರದ ಜೋಳದ ಬೆಳೆ. ಎರೆಹೊಲದಲ್ಲಿ ಹತ್ತಿ, ಗೋದಿ, ಕುಸುಬೆ ಬೆಳೆಗಳು. ಸುಗ್ಗಿಯ ಕಾಲದಲ್ಲಿ, ಹಬ್ಬ-ಹುಣ್ಣಿಮೆಗಳಲ್ಲಿ ಜನದ ಹಿಗ್ಗು ಹೇಳ ತೀರದು. ಮುಂಜಾನೆಯಿಂದ ಸಂಜೆಯ ವರೆಗೂ ಸಾಮಾನ್ಯ ಜನಕ್ಕೆ ಬಿಡುವಿಲ್ಲದ ದುಡಿತ. ಕೆಲಸದ ಜೊತೆಗೇ ಹಾಡಿನ ದನಿ ಹೊಮ್ಮುತ್ತಿತ್ತು. ಅವನ್ನು ಕೇಳುತ್ತಿದ್ದಂತೆ ನನಗೆ ಒಂದು ಬಗೆಯ ತನ್ಮಯತೆ.

ಎಲೆವಳ್ಳಿ ತೋಟಕ್ಕೆ ಕಪಲಿ [ಯಾತ] ಹೊಡೆಯುವಾಗ ಗಡಗಡೆಯ 'ಗಿರಕೂ' 'ಗಿರಕೂ'ನಾದ ದೂರದಿಂದ ನನ್ನನ್ನು ಕರೆಯುತ್ತಿರುವಂತೆ ಭಾಸವಾಗುತ್ತಿತ್ತು. ಊರಿನ ಸಮೀಪ ಗುಡ್ಡಗಳಲ್ಲಿ ಲಂಬಾಣಿ ತಾಂಡೆಗಳು. ಅವರ ವೇಷ, ಕುಣಿತ, ಹಾಡು ಒಂದು ವಿಸ್ಮಯಲೋಕವನ್ನೇ ಸೃಷ್ಟಿಸುತ್ತಿದ್ದವು. ಊರಿನ ಗ್ರಾಮ್ಯ ದೇವತೆಯ ಗುಡಿಯಲ್ಲಿ ವಾರಕ್ಕೊಮ್ಮೆ ಪಲ್ಲಕ್ಕಿ ಸೇವೆ, ಆಗ ಡೊಳ್ಳಿನ ಹಾಡುಗಳು ವಿಶೇಷ ಸಂದರ್ಭದಲ್ಲಿ ಕಹಳೆ, ಕರಡಿಮಜಲು, ಹೋಳಿಹುಣ್ಣಿಮೆಯಲ್ಲಿ ಹಲಗೆ ಬಡಿತ, ಬೆಳದಿಂಗಳಲ್ಲಿ ದನಿ ಎತ್ತಿದ ಹಾಡುಗಳು. ಸಮೀಪದ ಶಿರಹಟ್ಟಿಯಲ್ಲಿ ಫಕ್ಕೀರಸ್ವಾಮಿಮಠದ ಜಾತ್ರೆಯಲ್ಲಿ ತೇರು ಪರಿಸೆ, ಸಂಭ್ರಮ.

ಆ ಸಣ್ಣ ಹಳ್ಳಿಯಲ್ಲಿ ಎಲ್ಲ ವೃತ್ತಿಯವರೂ ಇದ್ದರು. ಒಕ್ಕಲುತನವಂತೂ ಜನದ ಜೀವಾಳ. ಕಮ್ಮಾರ, ಬಡಿಗ, ಕುಂಬಾರ, ಅಕ್ಕಸಾಲಿಗ, ಗಾಣಿಗ, ಒಡ್ಡ, ಮಾದಿಗ ಎಲ್ಲರೂ ಅಲ್ಲಿಯ ಜೀವನದ ಅವಿಭಾಜ್ಯ ಅಂಗವೇ ಆಗಿದ್ದರು.

ಹೀಗೆ ನಿಸರ್ಗ ಹಾಗೂ ಹಳ್ಳಿಯ ಸಾಮಾನ್ಯಜೀವನದ ಸುಖ- ದುಃಖ ಸಂತೋಷ- ಸಂಭ್ರಮ ನನ್ನ ಮೇಲೆ ಬೀರಿದ ಪ್ರಭಾವ ಬಹಳ ಮುಖ್ಯವಾದದ್ದು.

ನಿಸರ್ಗವನ್ನು ಬಿಟ್ಟರೆ ಬದುಕುವದೇ ಸಾಧ್ಯವಿಲ್ಲವೇನೊ ಎಂಬ ಭಾವನೆ, ಸಾಮಾನ್ಯ ಜನತೆಯ ಬಗ್ಗೆ ಪ್ರೀತಿ, ವಿಶ್ವಾಸ ಇವೆಲ್ಲ ನನ್ನ ಕಾವ್ಯದ ಮುಖ್ಯ ಪ್ರೇರಣೆಗಳು. ನನ್ನ ಕಾವ್ಯದ ಅನೇಕ ರೂಪಕ, ಪ್ರತಿಮೆ, ಸಂಕೇತಗಳು ಅದರ ನೆನಪಿನಿಂದಲೇ ರೂಪುಗೊಂಡದ್ದುಂಟು.

ತಂದೆ ಪ್ರಾಥಮಿಕ ಶಾಲಾ ಶಿಕ್ಷಕರೆಂದು ಹೇಳಿದೆ. ಅವರದು ಕಟ್ಟುನಿಟ್ಟಿನ ಧಾರ್ಮಿಕ ಜೀವನ. ಊರಿನ ಎಲ್ಲರಿಗೂ ಅವರ ಬಗ್ಗೆ ಗೌರವ. ಮನೆಯಲ್ಲಿ ಕಾವ್ಯ ಪುರಾಣಗಳ ವಾಚನ. ಶಾಲೆಯ ಪಠ್ಯ ಪುಸ್ತಕದಲ್ಲಿಯ ಕವಿತೆಗಳೆಲ್ಲವೂ ನನಗೆ ಬಾಯಿಪಾಠ. ಅಂದಿನಿಂದಲೇ ಕವಿತೆ ಓದುವುದರಲ್ಲಿ, ಹೇಳುವುದರಲ್ಲಿ ನನಗೆ ಆಸ್ಥೆ ಬೆಳೆಯಿತು.

ಮುಂದಿನ ಅಭ್ಯಾಸಕ್ಕೆ ನಾನು ಧಾರವಾಡ ಹತ್ತಿರದ ಗರಗ ಗ್ರಾಮಕ್ಕೆ ಬರಬೇಕಾಯಿತು. ೧೯೩೮ ರಿಂದ ೧೯೪೦ ರ ವರೆಗಿನ ಅಲ್ಲಿನ ನನ್ನ ವಾಸದ ಅವಧಿ ಸ್ವಾತಂತ್ರ್ಯ ಚಳವಳಿಗೆ ಕಾವೇರುತ್ತಿದ್ದ ಕಾಲ. ನಾವು ಶಾಲೆಯ ಹುಡುಗರು ಪ್ರತಿ ರವಿವಾರ ಪ್ರಭಾತಫೇರಿಯಲ್ಲಿ ಭಾಗವಹಿಸುತ್ತಿದ್ದೆವು. ಆಗ ಪ್ರಚಲಿತವಿದ್ದ ನಾಡಹಾಡುಗಳನ್ನು ಹಾಡುವುದರಲ್ಲಿ ನಾನು ಮುಂದಾಗಿರುತ್ತಿದ್ದೆ. ಅವುಗಳ ಧಾಟಿಯಲ್ಲಿಯೇ ನಾನೂ ಒಂದೆರಡು ಹಾಡುಗಳನ್ನು ರಚಿಸಿದ ಹಾಗೆ ನೆನಪು. ಅಲ್ಲಿಯ ವಾತಾವರಣ ನನ್ನ ಮುಗ್ಧ ಮನಸ್ಸಿನಲ್ಲಿ ದೇಶ ಭಕ್ತಿಯ ಕಾವನ್ನೂ ಹುಟ್ಟಿಸಿತು.

ಹೈಸ್ಕೂಲು ಶಿಕ್ಷಣಕ್ಕೆಂದು ಧಾರವಾಡಕ್ಕೆ ಬಂದ ಮೇಲೆ ನಗರ ಜೀವನಕ್ಕೆ ಕ್ರಮೇಣ ಒಗ್ಗಿಕೊಳ್ಳಬೇಕಾಯಿತು. ಮುರುಘಾಮಠದ ಪ್ರಸಾದ ನಿಲಯದಲ್ಲಿಯ ನನ್ನ ವಾಸ ಅಲ್ಲಿಯ ಆಧ್ಯಾತ್ಮಿಕ ವಾತಾವರಣದಿಂದ ಕೆಲಮಟ್ಟಿಗೆ ಪ್ರಭಾವಿತವಾಯಿತು; ವಚನ ಸಾಹಿತ್ಯ ಹಾಗೂ ಭಕ್ತ ಕವಿಗಳ ಬಗ್ಗೆ ನನ್ನ ಆಸ್ಥೆಯನ್ನು ಹೆಚ್ಚಿಸಿತು. ಬೇಂದ್ರೆ, ಬೆಟಗೇರಿ ಹಾಗೂ ಕುವೆಂಪು ಅವರ ಭಾವಗೀತೆಗಳು ಧಾರವಾಡದ ಗಾಳಿಯಲ್ಲಿ ಆಗಲೇ ಬೆರೆತು ಬಿಟ್ಟಿದ್ದರೂ ಮಧುರಚೆನ್ನರ ಕಾವ್ಯ ನನ್ನಲ್ಲಿ ವಿಚಿತ್ರವಾದ ಸಂವೇದನೆಯನ್ನುಂಟು ಮಾಡಿತು. ಹಾಯಸ್ಕೂಲಿನಲ್ಲಿದ್ದಾಗ ನಾನು ಬರೆಯಲು ಪ್ರಾರಂಭಿಸಿದ್ದರೂ ಕರ್ನಾಟಕ ಕಾಲೇಜಿಗೆ ಸೇರಿದ ಮೇಲೆ ಅದಕ್ಕೊಂದು ರೂಪು ಒದಗಿತು. ಜಯಂತಿ, ಜೀವನ, ಜಯ ಕರ್ನಾಟಕ ಪತ್ರಿಕೆಗಳಲ್ಲಿ ಕವಿತೆಗಳು ಪ್ರಕಟವಾಗುತ್ತಿದ್ದಂತೆ ಕಾವ್ಯ ರಚನೆಯ ಬಗ್ಗೆ ಆತ್ಮ ವಿಶ್ವಾಸವೂ ಹೆಚ್ಚುತ್ತ ಬಂದಿತು. ಸಹೃದಯ ಕವಿಮಿತ್ರರ ಸ್ನೇಹವಲಯ ಪ್ರೋತ್ಸಾಹದಾಯಕವಾಗಿತ್ತು. ಕರ್ನಾಟಕ ಏಕೀಕರಣ ಚಳವಳಿಗೂ ಧಾರವಾಡವೇ

ಕೇಂದ್ರವಾಗಿದ್ದರಿಂದ ನಾಡು, ನುಡಿಯ ಬಗೆಗಿನ ಪ್ರೀತಿ, ಅಭಿಮಾನ ಸಹಜವಾಗಿಯೇ ನನ್ನ ಕಾವ್ಯದ ಮೂಲ ಸೆಲೆಗಳಲ್ಲಿ ಒಂದಾಯಿತು.

ಆ ಕಾಲದ ಹಿರಿಯ ಕವಿಗಳೆಲ್ಲರೂ ನನಗೆ ಆಸ್ವಾದ್ಯರೇ ಆಗಿದ್ದರೂ ಅವರ ಕಾವ್ಯವನ್ನು ಅರಗಿಸಿಕೊಳ್ಳುತ್ತಲೇ ನಾನು ನನ್ನ ಭಾವಾಭಿವ್ಯಕ್ತಿಗೆ ಪ್ರಯತ್ನಿಸಿದೆ. ಆ ಮೂಲಕ ನನ್ನನ್ನು ನಾನು ಕಂಡು ಕೊಳ್ಳುವ ಹಾದಿಯನ್ನು ಹುಡುಕಿ ಕೊಂಡೆ. ನನಗೆ ಬೇಂದ್ರೆಯವರ ಪ್ರತ್ಯಕ್ಷ ಪರಿಚಯವಾದದ್ದು 'ಕಾವ್ಯಾಕ್ಷಿ'ಗೆ ಅವರು (೧೯೪೯) ಮುನ್ನುಡಿ ಬರೆದ ಮೇಲೆಯೇ. ನನ್ನ ಎರಡನೆಯ ಕಾವ್ಯ 'ಭಾವಜೀವಿ' ಕಾವ್ಯಪ್ರೇಮಿಗಳನ್ನು ವಿಶೇಷವಾಗಿ ಆಕರ್ಷಿಸಿತು. ಆ ನೀಳ್ಗವನವನ್ನು ಇಂದಿಗೂ ಬಾಯಿಪಾಠ ಹೇಳುವ, ಹಲವಾರು ನುಡಿಗಳನ್ನು ಆಗಾಗ ಉದ್ಧರಿಸುವ ಹಳೆಯ ಗೆಳೆಯರಿದ್ದಾರೆ. ಅಂಥದನ್ನು ಆ ರೀತಿಯಲ್ಲಿ ಮತ್ತೆ ಬರೆಯುವದು ನನ್ನಿಂದ ಸಾಧ್ಯವಿಲ್ಲವೆಂದೇ ತೋರುತ್ತದೆ. ನಂತರದ ಕವನ ಸಂಗ್ರಹ 'ಆಕಾಶಬುಟ್ಟಿ' ಯಲ್ಲಿ ನನ್ನ ಹಾದಿ ಸ್ಪಷ್ಟವಾಗಿ ಗೋಚರಿಸುವಂತಾಯಿತು. ಅದೇ ಸಂದರ್ಭದಲ್ಲಿ ಅಥವಾ ಅದಕ್ಕೂ ಮೊದಲೆ ಪ್ರಗತಿಶೀಲರ ವಾಸ್ತವ ದೃಷ್ಟಿಕೋನ ನನ್ನ ಮಾನಸ್ಸನ್ನು ಸೆಳೆದಿರಬೇಕು. ಆದರೆ ಅದು ತಾತ್ಕಾಲಿಕವಾಗಿ ಮಾತ್ರ.

ಒಂದು ಮಾತನ್ನು ಇಲ್ಲಿಯೇ ಹೇಳಬೇಕು. ನನ್ನದು ಗುಣಸ್ವೀಕಾರ ದೃಷ್ಟಿ. ಒಳ್ಳೆಯ ಅಂಶ ಎಲ್ಲಿದ್ದರೂ ಅದನ್ನು ನನ್ನ ಪ್ರಕೃತಿಗನುಗುಣವಾಗಿ ಅಳವಡಿಸಿ ಅರಗಿಸಿಕೊಳ್ಳುವವರತ್ತ ಒಲವು. ಕನ್ನಡ ಕಾವ್ಯಪರಂಪರೆಗೆ ನಿಷ್ಠವಾಗಿದ್ದುಕೊಂಡೇ ನಾನು ಹೊಸದನ್ನು ಆಶಿಸುವಂಥವನು. ಆದುದರಿಂದಲೇ ನವ್ಯ, ಬಂಡಾಯ ಇತ್ಯಾದಿ ಆಂದೋಲನಗಳು ಪರಂಪರೆಗೆ ಹೊರತಾಗಿ ಕಾಣಿಸಿಕೊಳ್ಳದೆ ನಮ್ಮ ಕಾವ್ಯದ ಅಂದಂದಿನ ಕೊರತೆಗಳನ್ನು ತುಂಬಿ ಹೊಸ ಶಕ್ತಿಯನ್ನು ತಂದು ಕೊಟ್ಟು, ಅದನ್ನು ಜೀವಂತವಾಗಿ ಮುಂದುವರಿಸುವ ವಿಧಾನವಾಗಿಯೇ ನನಗೆ ಕಂಡು ಬಂದಿದೆ.

ನನ್ನ ಕಾವ್ಯ ಸೃಷ್ಟಿಯ ಸಂದರ್ಭದಲ್ಲಿ ಓದುಗರನ್ನೂ ನಾನು ಗೌರವದಿಂದಲೇ ಕಾಣುತ್ತ ಬಂದಿದ್ದೇನೆ. ನಂತರದ ಸ್ಥಾನ ವಿಮರ್ಶಕರದು. ನನ್ನ ಕಾವ್ಯದ ಬೆಳವಣಿಗೆಯಲ್ಲಿ ಅವರ ಪಾಲನ್ನು ನಿರಾಕರಿಸುವಂತಿಲ್ಲ. ನನ್ನ ಮಟ್ಟಿಗೆ ಕಾವ್ಯದಲ್ಲಿ ಮನುಷ್ಯನನ್ನು ಕೇವಲ ಮನುಷ್ಯನನ್ನಾಗಿ ನೋಡುತ್ತೇನೆಯೇ ಹೊರತು ಯಾವುದೇ ವರ್ಗ ವರ್ಣಗಳ ಪ್ರತಿನಿಧಿಯಾಗಿ ಅಲ್ಲ. ಕಾವ್ಯದಲ್ಲಿ ಬಳಸಿದ ಪದಗಳ ಬಗ್ಗೆ ಕವಿ ಗಮನದಲ್ಲಿಟ್ಟುಕೊಂಡಿರುವ ಆಯಾಮವನ್ನು ವಿಮರ್ಶಕ ಗ್ರಹಿಸದೇ ಹೋದರೆ ಅಂಥ ವಿಮರ್ಶೆ ಎಡವಟ್ಟಾಗಿ ತೋರಬಹುದು. ಕವಿಯ ಶ್ರದ್ಧೆಯ ಕೇಂದ್ರವನ್ನು ಸರಿಯಾಗಿ ಗುರುತಿಸದೆ ಹೋದಾಗ ಅಂಥ ತಪ್ಪುಗಳು ಆಗುವದುಂಟು.

ಮೃತ್ಯುಪ್ರಜ್ಞೆ ಹಾಗೂ ಮಾನವ ಜೀವಿತದ ಸಾಧನೆಯ ಬಗೆಗಿನ ಚಿಂತನ ನನ್ನ ಮನಸ್ಸನ್ನು ಆಗಾಗ ಕಾಡಿದೆ, ಕಾಲದ ಅಗಾಧತೆ ಹಾಗೂ ಅನಂತತೆಯಲ್ಲಿ ಮನುಷ್ಯನ ಒಳ್ಳೆಯತನಕ್ಕೆ ಆಗೀಗ ಮೋಡ ಮುಸುಕಿದರೂ ಅದರ ಸ್ವಯಂಪ್ರಕಾಶಕ್ಕೆ ಕುಂದಿಲ್ಲವೆಂಬ ಅನಿಸಿಕೆ ನನ್ನದು. ಜೀವನದ ನಿಜವಾದ ಸಂತೋಷ, ಸುಖ, ತೃಪ್ತಿ ಸಮಾಧಾನಗಳು ಪ್ರೀತಿಯನ್ನೇ ಆಧರಿಸಿವೆ.

ಈಗ ಕಾವ್ಯ ಪ್ರಕ್ರಿಯೆಯ ಕುರಿತು ಎರಡು ಮಾತು. ಅಂತರಂಗ ಹಾಗೂ ಬಹಿರಂಗದ ನಡುವೆ ಘರ್ಷಣೆ ನಿರಂತರ ಇದ್ದುದೇ. ಈ ಭಾವ ತುಮುಲದಿಂದ ಕವಿತೆ ರೂಪುಗೊಂಡು ಆದರಿಂದ ಪ್ರತ್ಯೇಕವಾಗಿ ಅದು ನಿಲ್ಲುತ್ತದೆ: ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದ ಮಗುವಿನಂತೆ. ಕಾವ್ಯ ರಚನೆಗೆ ಸ್ಫೂರ್ತಿಬೇಕು, ಅದರಿಂದಲೇ ಅದಕ್ಕೆ ಸಹಜತೆ. ಆದರೆ ಅದೇ ಮುಖ್ಯ ಬಂಡವಾಳವಲ್ಲ, ಆದರೆ ನಮ್ಮ ಅನುಭವಗಳನ್ನು ಪುನಃ ನಮ್ಮ ಸ್ಮರಣೆಗೆ ತಂದು ಕೊಡುವ ಕಾರ್ಯವನ್ನು ಅದು ನೆರವೇರಿಸಬಲ್ಲುದು. ಭಾವ ಮತ್ತು ಬುದ್ಧಿ ಪರಸ್ಪರ ಸಮ್ಮುಖಗೊಂಡಾಗ ಮೂಡುವ ಪ್ರತಿಮೆ ಕವಿತೆಯ ಪ್ರಥಮ ರೂಪವೆಂದು ಹೇಳುವದು ನಿಜವೆನಿಸುತ್ತದೆ. ಅದರ ಬೆಳವಣಿಗೆಯ ಕ್ರಮ, ಪದಗಳು, ಸಾಲುಗಳು, ಮುಕ್ತಾಯಗೊಳ್ಳುವ ರೀತಿ ಯಾವುದೂ ಪೂರ್ವನಿರ್ಧಾರಿತವಲ್ಲ. ಸುಪ್ತ ಪ್ರಜ್ಞೆಯಲ್ಲಿ ಅನಿರೀಕ್ಷಿತ ಅಂಶಗಳನ್ನು ಒಳಗೊಳ್ಳುತ್ತ ಕವಿಯ ಆತ್ಮದ ಚೈತನ್ಯದ ಕಣಗಳೊಂದಿಗೆ ಬೆಳೆದುಕೊಳ್ಳುತ್ತ ಸಾಗುವದೇ ಕಾವ್ಯ ಪ್ರಕ್ರಿಯೆಯ ಪ್ರಮುಖ ಅಂಶ.

ಭಾಷೆಯ ದೃಷ್ಟಿಯಿಂದ ನನ್ನ ಒಲವು ಮೊದಲಿನಿಂದಲೂ ದೇಸಿಯ ಕಡೆಗೆ. ಕನ್ನಡ ಕಾವ್ಯ ಪರಂಪರೆಯೂ ದೇಸಿಮೂಲವಾದದ್ದೆ. ಶಿಷ್ಟ ಭಾಷೆಯಲ್ಲಿಯೂ ಬಳಕೆಯ ನುಡಿಗೆ ಬೇರೊಂದು ಸೊಗಸಿರುತ್ತದೆ. ಸ್ವಚ್ಛಂದ ಛಂದ ಕೆಲವರು ಭಾವಿಸಿದಂತೆ ಸುಲಭವಾಗಿ ಕೈಗೂಡುವಂಥದಲ್ಲ. ಉಳಿದ ಕಲೆಗಳಂತೆಯೇ ಕಾವ್ಯವೂ ಕೂಡ ಸಾಕಷ್ಟು ಪರಿಶ್ರಮವನ್ನು, ಕಸಬುಗಾರಿಕೆಯನ್ನು ಬಯಸುವಂಥದು. ಅಲ್ಲಿ ಯಾವ ರಿಯಾಯಿತಿಗೂ ಆಸ್ಪದವಿಲ್ಲವೆಂದೇ ನನ್ನ ಭಾವನೆ. ಸಾನೆಟ್ ನನ್ನ ಪ್ರೀತಿಯ ಕಾವ್ಯ ಪ್ರಕಾರವಾಗಿರುವುದು ಈ ದೃಷ್ಟಿಯಿಂದಲೇ.

ನಾನು ಹಿಂದೆ ಬರೆವ ಕವಿತೆಗಳನ್ನೆಲ್ಲ ಆ ಕ್ಷಣದಲ್ಲಿ ಮರೆತು ಬಿಡುತ್ತೇನೆ. ಒಂದು ವಸ್ತು ಮತ್ತೆ ಮತ್ತೆ ಮನಸ್ಸನ್ನು ಕಾಡುವದಿಲ್ಲವೆಂದೇನೂ ಇದರ ಅರ್ಥವಲ್ಲ. ಹಿಂದೆ ಬರೆದಿದ್ದುದರ ಬೇರೊಂದು ಮಗ್ಗುಲನ್ನೊ, ವಿಶೇಷ ದೃಷ್ಟಿಕೋನವನ್ನೋ ಕಾಣಿಸಬೇಕೆನ್ನುವ ಒತ್ತಡ ಉಂಟಾದಾಗ ಅದು ಮತ್ತೆ ರೂಪುಗೊಳ್ಳ

ಬಹುದು. ಆದರೆ ಸಾಮಾನ್ಯವಾಗಿ ಒಮ್ಮೆ ಬರೆದು ಬಿಟ್ಟ ಮೇಲೆ ಆ ರಚನೆಯ ಬಗ್ಗೆ ಹೆಚ್ಚಿನ ಮೋಹವಾಗಲಿ, ಮಮತೆಯಾಗಲಿ ನನ್ನಲ್ಲಿ ಉಳಿಯುವದಿಲ್ಲ. ಮಕ್ಕಳನ್ನು ಬಹಳ ಮುದ್ದು ಮಾಡಬಾರದೆಂದು ಹಿರಿಯರು ಹೇಳುವದು ನೆನಪಾಗುತ್ತದೆ. ಈ ಸಂದರ್ಭದಲ್ಲಿ ಖಲೀಲ್ ಗಿಬ್ರಾನ್ children ಕುರಿತು ಬರೆದ ಕವನದ ಕೆಲವು ಸಾಲುಗಳು ನನ್ನ ಸ್ಮೃತಿಪಟಲದಲ್ಲಿ ಮೂಡಿ ನಿಲ್ಲುತ್ತವೆ.

Your children are not your children
They are the sons and daughters of
Life's longing for itself.
They come through you but not from you.
And though they are with you yet they
belong not to you.

ನಾನು ಮತ್ತು ನನ್ನ ಕಾವ್ಯದ ಬಗ್ಗೆ ಇದು ಒಂದು ಇಣುಕು ನೋಟ, ಅಷ್ಟೆ. ಸಮಗ್ರ ವಿವರಣೆಯಲ್ಲ. ಈ ಸಂದರ್ಭಕ್ಕೆ ಇಷ್ಟು ಮಾತು ನನ್ನ ಆಲೋಚನೆಗೆ ಹೊಳೆದವು. ಈಗ ನನ್ನ ಕೆಲವು ಕವಿತೆಗಳನ್ನು ತಮಗೆ ಓದಿ ತೋರಿಸುತ್ತೇನೆ. ಕಾವ್ಯವನ್ನು ಗಟ್ಟಿಯಾಗಿ ಓದುವದು ನನಗೆ ಪ್ರಿಯವಾದ ವಿಷಯ. ಯಾಕೆಂದರೆ ಹೀಗೆ ಓದುತ್ತಿರುವಂತೆಯೇ ಅವು ನನಗೆ ಮತ್ತೆ ಏನೋ ಹೊಸತನ್ನು ಹೇಳುತ್ತಿರುವಂತೆ ಭಾಸವಾಗುತ್ತದೆ. ಹಾಗೆಯೇ ಅಲ್ಲಲ್ಲಿಯ ದೌರ್ಬಲ್ಯಗಳೂ ತನ್ನಷ್ಟಕ್ಕೆ ಗೋಚರಿಸುತ್ತವೆ.

[ ಓದಿದ ಕವಿತೆಗಳು : ೧. ನಂಬಿಕೆ, ೨. ಬಿಸ್ಮಿಲ್ಲಾರ ಶಹನಾಯಿ ವಾದನ ಕೇಳಿ ೩. ಗುಬ್ಬಿ ೪. ಹಿರಿಯರ ಸಾವು ೫. ಗೋಸುಂಬೆ ೬. ಈ ವರ್ಷ ಕಂಡ ಮಳೆಗಾಲ ].



# ಅಧ್ಯಕ್ಷ ಭಾಷಣ

---

ಜಿ. ಎಸ್. ಆಮೂರ

ಕಳೆದ ಮೂರು ದಿನಗಳಿಂದ ನಮ್ಮ ನಾಡಿನ ಇಬ್ಬರು ಶ್ರೇಷ್ಠ ಕವಿಗಳ ಕಾವ್ಯದ ಬಗ್ಗೆ ಚರ್ಚೆಯನ್ನು ಯೋಜಿಸಿ, ಮತ್ತೆ ಕೊನೆಗೆ ಆ ಕವಿಗಳ ಮುಖದಿಂದಲೇ ಅವರ ವ್ಯಕ್ತಿತ್ವದ ಬಗ್ಗೆ, ಅವರ ಕಾವ್ಯದ ಬಗ್ಗೆ ಮಾತುಗಳನ್ನು ಕೇಳುವಂಥ ಒಂದು ಸುಯೋಗವನ್ನು ಇಲ್ಲಿನ ಜನತೆಗೆ ಒದಗಿಸಿದ ಈ ಸಮಾರಂಭದ ವ್ಯವಸ್ಥಾಪಕರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಶಿವರುದ್ರಪ್ಪನವರು ಮತ್ತು ಕಣವಿಯವರು ಇಬ್ಬರೂ "ಸಮನ್ವಯದ ಕವಿಗಳು" ಎಂಬ ಹಣೆ ಚೀಟಿಯನ್ನು (ಲೇಬಲ್) ಸ್ವೀಕರಿಸಲಿಲ್ಲ, ಇದು ಬಹಳ ಯೋಗ್ಯವಾದ ಸಂಗತಿ. ಯಾಕೆಂದರೆ ಒಳ್ಳೆಯ ಕವಿಗೆ ಯಾವ ಹಣೆಚೀಟಿಯೂ ಬೇಡ. ಪಂಪ, ರನ್ನ, ಕುಮಾರವ್ಯಾಸ, ಹರಿಹರ ಹಾಗೆಯೇ ಇವತ್ತು ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿ ಕುವೆಂಪು, ಬೇಂದ್ರೆ, ಕಣವಿ, ಶಿವರುದ್ರಪ್ಪ ಹೀಗೇ ಹೇಳಬಹುದೇ ಹೊರತು ಯಾವ ಒಂದು ಪಂಗಡಕ್ಕಾಗಲಿ ಹಣೆಚೀಟಿ ಅಂಟಿಸಿ ಒಬ್ಬ ಕವಿಯನ್ನು ಗುರ್ತಿಸಲಿಕ್ಕೆ ಸಾಧ್ಯವಿಲ್ಲ. ಇಂತಹ ಕೆಲಸ ಯಾವ ಸಾಹಿತ್ಯದಲ್ಲೂ ನಡೆಯುವದಿಲ್ಲ.

ಸಾಮಾನ್ಯವಾಗಿ ಕವಿ ತನ್ನ ಕಾವ್ಯವನ್ನು ರಚಿಸಿ ಅದನ್ನು ರಸಿಕರೆದುರಿಗೆ ಇಟ್ಟು ಬಿಡುತ್ತಾನೆ. ಅದರ ಬಗ್ಗೆ ಒಂದು ರೀತಿಯ ನಿರ್ಲಿಪ್ತತೆಯನ್ನು ಅವನು ಬೆಳೆಸಿಕೊಂಡು ಬರುತ್ತಾನೆ. ಎಷ್ಟೋಸಲ ಕವಿಗಳಿಗೆ, ನಾವು ಕವಿಗಳ ಹತ್ತಿರ ಹೋಗಿ

"ಈ ಕವಿತೆಯ ಅರ್ಥ ಏನು ?" ಎಂದು ಕೇಳಿದರೆ— ಕೆಲವರು ಏನೇನೋ ಹೇಳಬಹುದು. ಆದರೆ ಪ್ರಾಮಾಣಿಕನಾದ ಕವಿ ಏನು ಹೇಳುತ್ತಾನೆಂದರೆ— "ನನಗೆ ಗೊತ್ತಿಲ್ಲ" ಎಂದೇ ಹೇಳುವನು. ಏಕೆಂದರೆ ಒಬ್ಬ ಕವಿತೆಯನ್ನು ಬರೆಯುವ ವ್ಯಕ್ತಿ ಸ್ಫೂರ್ತಿಯ ಒಂದು ಪ್ರಭಾವದಲ್ಲಿ, ಕೇಂದ್ರೀಕೃತವಾದ ಶಕ್ತಿಗಳ ಸಂಯೋಗದಲ್ಲಿ ಒಂದು ಕವಿತೆ ಹುಟ್ಟಿಬರುತ್ತದೆ. ಆ ಕವಿತೆ ಹುಟ್ಟಿಬಂದ ಮೇಲೆ ಕವಿಯಾದವ ಅದೇ ವ್ಯಕ್ತಿಯಾಗಿರುವದಿಲ್ಲ. ಆದ್ದರಿಂದ ಈ ಕವಿತೆಯ ಅರ್ಥ ಏನು ಎಂದು ಹೇಳುವದಕ್ಕೆ ಅವನಿಂದ ಆಗುವದಿಲ್ಲ.

ಬ್ರೌನಿಂಗನ ಬಗ್ಗೆ ಒಂದು ಕತೆಯುಂಟು. ಇಂಗ್ಲೀಷ ಕವಿ ಬ್ರೌನಿಂಗ್‌ನಿಗೆ ಒಬ್ಬರು ಹೋಗಿ ಈ ಸಾಲುಗಳ ಅರ್ಥ ಏನು ಅಂತ ಕೇಳಿದರಂತೆ. ಅದಕ್ಕೆ ಅವನು ಏನು ಹೇಳಿದನೆಂದರೆ— ಇದನ್ನು ಬರೆದಾಗ ದೇವರಿಗೆ ಮತ್ತು ನನಗೆ ಇಬ್ಬರಿಗೇ ಗೊತ್ತಿತ್ತು, ಇವತ್ತು ದೇವರಿಗಷ್ಟೇ ಗೊತ್ತು. ನನಗೇ ಗೊತ್ತಿಲ್ಲ ಎಂದನಂತೆ. ಅದೇ ರೀತಿ ಟಿ. ಎಸ್. ಈಲಿಯಟ್ [T. S. Eliot] ಆಧುನಿಕ ಪಾಶ್ಚಾತ್ಯ ಕವಿಗಳಲ್ಲಿ ಅಗ್ರಗಣ್ಯ. ಅವನೊಮ್ಮೆ ಆಕ್ಸಫರ್ಡ ವಿಶ್ವವಿದ್ಯಾಲಯಕ್ಕೆ ಹೋದಾಗ ಅವನಿಗೆ ಒಂದು ಸಾಲಿನ (ಪದ್ಯದ) ಅರ್ಥವನ್ನು ಕೇಳಿದರು. ಅವನು ಬಹಳ ವಿಚಾರ ಮಾಡಿದ ಹಾಗೆ ಮಾಡಿ. ಅವನೇನು ಮಾಡಿದನೆಂದರೆ— ಆ ಸಾಲನ್ನು ಮತ್ತೊಮ್ಮೆ ಓದಿಬಿಟ್ಟ, ಅಷ್ಟೇ. ಅದಕ್ಕೂ ಹೆಚ್ಚಿಗೆ ಆ ಸಾಲಿನ ಬಗ್ಗೆ ಏನೂ ಹೇಳಲಿಲ್ಲ. ಆದರೂ ಕೂಡ ಕವಿಗಳಿಗೆ ಆ ಕಾವ್ಯದ ಸವಿಯನ್ನು ಅನುಭವಿಸುವವರು ಬೇಕಾಗುತ್ತಾರೆ. ಇವರಿಗೆ ರಸಿಕರು ಎಂದು ಸಾಮಾನ್ಯವಾಗಿ ಕರೆಯುತ್ತೇವೆ.

ಕವಿಗಳಿಗೂ ರಸಿಕರಿಗೂ ಒಂದು ರೀತಿಯ ಪ್ರೇಮ ಸಂಬಂಧವಿರುತ್ತದೆ. ನಮ್ಮ ಹಳೆಯ ಕವಿಗಳು ಹೇಳಿದ ಹಾಗೆ ಎಷ್ಟು ಚಂದವಾದ ಒಂದು ಬಾಸಿಗವನ್ನು (ಬಾಸಿಂಗ ?) ಮಾಲೆಗಾರ ಕಟ್ಟಿದರೂ ಕೂಡ ಅವನ್ನು, ಅವರ ಸೊಗಸನ್ನು ಅನುಭವಿಸಿ ಸಂತೋಷವನ್ನು ಪಡುವಂತಹ ಒಬ್ಬ ರಸಿಕ ವ್ಯಕ್ತಿಯೂ ಬೇಕು, ಇದು ನಿಜ. ನಾನು ತಮ್ಮೆದುರಿಗೆ ನಿಂತದ್ದು ಕವಿಯಾಗಿ ಅಲ್ಲ, ವಿಮರ್ಶಕನಾಗಿ. ಈ ವಿಮರ್ಶಕನ ಬಗೆಗೆ ಸಾಮಾನ್ಯವಾಗಿ ಜನರಲ್ಲಿ ಒಂದು ಕುತೂಹಲವಿರುತ್ತದೆ. ಬಹಳಷ್ಟು ಕವಿಗಳು ಅದರಲ್ಲೂ ಇಂಗ್ಲೀಷನಲ್ಲಿ ಹೇಳುವ ಹಾಗೆ ಅವನೊಬ್ಬ ನೆಸಸ್ಸರಿ ಈವಿಲ್ (Necessary Evil) ಅಂತ ಹೇಳುತ್ತೇವೆ. ಅಂದರೆ ಅವನೊಬ್ಬ ಕೆಟ್ಟ ಪ್ರಾಣಿ ನಿಜ, ಆದರೆ ಉಪಯೋಗಕ್ಕೆ ಬೀಳುವ ಕೆಟ್ಟ ಪ್ರಾಣಿ ಅನ್ನುವ ಒಂದು ಅರ್ಥ ಇರುತ್ತದೆ.

ಒಬ್ಬ ಕವಿ; ಕಣವಿಯವರೂ ಅಲ್ಲ ಶಿವರುದ್ರಪ್ಪನವರೂ ಅಲ್ಲ. ಶಿವರುದ್ರಪ್ಪನವರು ವಿಮರ್ಶಕರೂ ಹೌದು, ಅವರಿಗೆ ವಿಮರ್ಶಕರ ಬಗೆಗೆ ಪ್ರೀತಿಯೂ ಇದೆ. ಆದರೆ ಒಬ್ಬ ಕವಿ ವಿಮರ್ಶಕನನ್ನು ಹಾವು ಎಂದು ಕರೆದ. ಅಂದರೆ ಹಾವುಗಳು ವಿಷಕಾರುತ್ತಿರುತ್ತವೆಯಲ್ಲ, ಎಷ್ಟೋ ಸಲ ಈ ಕವಿಗಳ ಬಗೆಗೆ ಕೆಟ್ಟ ಮಾತುಗಳನ್ನಾಡುತ್ತಾರೆ, ವಿಷಕಾರುತ್ತಾರೆ. ಆ ದೃಷ್ಟಿಯಿಂದ ಅವರಿಗೆ 'ಹಾವು' ಎಂದು ಒಬ್ಬ ದೊಡ್ಡ ಕವಿ ಕರೆದ.

ತಮಗೆ ಗೊತ್ತಿರುವ ಹಾಗೆ ಈ ಹಾವುಗಳೂ ಕೂಡ ಒಂದೊಂದು ದಿವಸ ಪೂಜೆಗೆ ಯೋಗ್ಯವಾಗುತ್ತವೆ. ನಾಗರ ಪಂಚಮಿ ಬಂದಿತು ಎಂದರೆ ಹಾವು ಅನ್ನುವದಿಲ್ಲ, ಅದು ನಾಗಪ್ಪ. ಯಾವದೋ ಸಾಂಗ್ಲಿಯ ಹತ್ತಿರ ಒಂದು ಹಳ್ಳಿ ಇದೆಯಂತೆ. ಅಲ್ಲಿ ಈ ನಾಗ,ಸರ್ಪಗಳನ್ನೆಲ್ಲ ಕುತ್ತಿಗೆಗೆ ಹಾಕಿಕೊಂಡು ಚಿಕ್ಕ ಮಕ್ಕಳೂ ಕೂಡ ನಾಗರ ಪಂಚಮಿ ದಿವಸ ಅಡ್ಡಾಡುತ್ತಾರಂತೆ. ಅವತ್ತು ನಾಗರ ಪಂಚಮಿ ದಿವಸ ಹಾವುಗಳು ಅಂದರೆ ನಾಗಪ್ಪಗಳು ಅವರಿಗೆ ಕಚ್ಚುವದಿಲ್ಲ. ಅಂತಹ ದಿವಸ–ಇದು, ಇವತ್ತಿನದು. ನನ್ನ ಮಟ್ಟಿಗೆ ಇದು ನಾಗರ ಪಂಚಮಿ. ಆದ್ದರಿಂದ ಈ ಸಮಾರಂಭವ ಸಮಾರೋಪ ಭಾಷಣವನ್ನು ಮಾಡಲು ಹೋಗುವದಿಲ್ಲ. ಎಷ್ಟೋ ಸಲ ಸಮಾರೋಪ ಭಾಷಣವೆಂದರೆ ಆರೋಪ ಭಾಷಣವೇ ಆಗುತ್ತದೆ,

ನಮ್ಮ ಕಾಲೇಜಿನಲ್ಲಿ ನಾನು ಕಲಿಸುತ್ತಿದ್ದೆ, ನಮ್ಮ ಪ್ರಿನ್ಸಿಪಾಲರೊಬ್ಬರಿದ್ದರು. ಅವರಿಗೊಂದು ಚಟ. ಯಾರೇ ಒಬ್ಬರು ಕಾಲೇಜಿಗೆ ಬಂದು ಭಾಷಣ ಕೊಟ್ಟರೆಂದರೆ ಆ ಭಾಷಣವನ್ನು ಸಮಾರೋಪ ಮಾಡುವದು. ಅಂದರೆ ಅದರ ಸಮರಿ ಹೇಳುವ ವಿಚಾರ ಅವರು ಇಟ್ಟುಕೊಂಡಿದ್ದರು. ಆದರೆ ಎಷ್ಟೋಸಲ ಅವರಿಗೆ ಈ ಭಾಷಣ ಅರ್ಥವೇ ಆಗುತ್ತಿರಲಿಲ್ಲ. ಒಂದು ಸಲ ಒಬ್ಬ ದೊಡ್ಡ ಸರ್ಜನ್‌ರವರು ಬಂದು ಈ "ಪಿಟ್ಯುಟರಿ ಗ್ಲ್ಯಾಂಡ್ಸ್" ಅನ್ನೋ ದೇಹದ ಒಂದು ಗ್ರಂಥಿ, ಒಂದು ಭಾಗ– ಅದರ ಬಗ್ಗೆ ಭಾಷಣ ಕೊಟ್ಟರು.ಚಿತ್ರ ತೆಗೆದು ಬಹಳ ಚೆನ್ನಾಗಿ ವಿದ್ವತ್ಪೂರ್ಣವಾದ ಭಾಷಣ ಕೊಟ್ಟರು. ನಮಗೆಲ್ಲ ತಿಳಿದಿತ್ತು. ವಿದ್ಯಾರ್ಥಿಗಳಿಗೂ ತಿಳಿದಿತ್ತು. ನಮ್ಮ ಪ್ರಿನ್ಸಿಪಾಲರು ಎದ್ದು ಅದನ್ನು ಸಮರೈಜ್ ಮಾಡಲು ಶುರು ಮಾಡಿದರು ಎಲ್ಲಾ ತಪ್ಪು ಹೇಳಿದರು. ಆಮೇಲೆ ಅವರಿಗೆ, ಅಂದರೆ ಡಾಕ್ಟರ್‌ರವರಿಗೆ ಸಂಶಯ ಬಂದಿತು— ಪ್ರಿನ್ಸಿಪಾಲ ಆದವರಿಗೇ ತಿಳಿದಿಲ್ಲ ಇದು, ವಿದ್ಯಾರ್ಥಿಗಳಿಗೆ ಹೇಗೆ ತಿಳಿದಿದ್ದೀತು ? ಎಂದು ತಿಳಿದು ಇಂಗ್ಲೀಷ್‌ನಲ್ಲಿ ಮಾಡಿದ ಭಾಷಣವನ್ನೇ ಕನ್ನಡದಲ್ಲಿ ಮತ್ತೊಂದು ತಾಸು ಮಾಡಿದರು. ಪ್ರಿನ್ಸಿಪಾಲರು ತಿಳಿಯಬೇಕಾಗಿತ್ತೋ ಇಲ್ಲವೋ; ಆದರೆ ಮತ್ತೆ ಎದ್ದು ನಿಂತು ಆಮೇಲೆ ಸಮರೈಜ್ ಮಾಡಿ ಮತ್ತೆ ತಪ್ಪಿದರು. ಇದಾದ

ನಂತರ ಆ ಡಾಕ್ಟರು ಮರಾಠಿಯಲ್ಲಿ ಮತ್ತೆ ಹತ್ತು ನಿಮಿಷ ಅದನ್ನು (ಭಾಷಣ) ಸಮರೈಜ್ ಮಾಡಿದರು. ಅದಕ್ಕೆ ನಾನು ಈ ರೀತಿ ಸಮಾರೋಪ ಭಾಷಣ ಮಾಡಲಿಕ್ಕೆ ಹೋದರೆ ಶಿವರುದ್ರಪ್ಪನವರು ಮತ್ತು ಕಣವಿಯವರು ಮರಾಠಿ ಇಲ್ಲದೇ ಹೋಗಬಹುದು ಕನ್ನಡದಲ್ಲೇ ಮತ್ತೆ ಸಮರೈಜ್ ಮಾಡುವ ಪ್ರಸಂಗ ಬರಬಹುದು. ಆದ್ದರಿಂದ ಆ ವಿಷಯಕ್ಕೆ ನಾನು ಹೋಗುವದಿಲ್ಲ.

ಆದರೆ ಒಂದು ಮಾತನ್ನು ಹೇಳಬೇಕು. ಒಂದು ಕವಿತೆ ಒಬ್ಬ ಕವಿಯಿಂದ ಹೊರಗೆ ಬಂದ ಮೇಲೆ ಅದರ ಅರ್ಥ ಮಾಡಿಕೊಳ್ಳುವದು, ಅದರ ಆನಂದವನ್ನು ಸವಿಯುವದು ನಮ್ಮ ಎಲ್ಲ ಸಾರ್ವಜನಿಕರ (ಸಮಾಜಿಕರ) ಕರ್ತವ್ಯ. ಆದರೆ ಇಷ್ಟೊಂದು ಸರಳ, ಸುಲಭವಾದ ಕೆಲಸ ಅಲ್ಲ. ನಿಮಗೆ ಗೊತ್ತಿರಲಿಕ್ಕಿಲ್ಲ. ನಾನು ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದಾಗ ನಮ್ಮ ಪಠ್ಯಪುಸ್ತಕದಲ್ಲಿ ಬರುವ ಕವಿತೆಗಳೆಂದರೆ—

“ದನವನು ಕಾಯುವ
ಬಾಲಕ ಈರನು
ದಿನ ದಿನ ಅಡವಿಗೆ
ಹೋಗುವನು”— ಇತ್ಯಾದಿ, ಇತ್ಯಾದಿ.

೧೯೪೦ರ ಸುಮಾರಿಗೆ ಅದಕ್ಕಿಂತ ಮೊದಲಿಗೇನೇ ಈ ಪಠ್ಯಪುಸ್ತಕದಲ್ಲಿ “ಹಕ್ಕಿ ಹಾರುತಿದೆ ನೋಡಿದಿರಾ ?” ಬೇಂದ್ರೆಯವರ ಇಂಥ ಕವಿತೆಗಳು ಬರಲಿಕ್ಕೆ ಪ್ರಾರಂಭ ವಾದವು. ಪ್ರಾರಂಭವಾದ ಮೇಲೆ ಈ ಶಾಲಾ ಶಿಕ್ಷಕರಿಗೆಲ್ಲ ಒಂದು ದೊಡ್ಡ ಪ್ರೊಬ್ಲೆಮ್— ಇದನ್ನು ಕಲಿಸುವದು ಹೇಗೆ ? ಎಂಬುದು.

ಬಿಜಾಪೂರ ಜಿಲ್ಲೆಯಲ್ಲಿ ನನಗೆ ಒಬ್ಬ ಕಕ್ಕ (ಚಿಗಪ್ಪ) ಇದ್ದರು. ಅವರ ಊರಿಗೆ ಬಿ. ಎ. ಆದ ಹೊಸದರಲ್ಲಿ ಹೋಗಿದ್ದೆ. ಒಬ್ಬ ಬಿ. ಎ. ಆದ ಮನುಷ್ಯ ಬಂದಿದ್ದಾನೆಂದ ಮೇಲೆ ಇವನನ್ನು ವಿಚಾರಿಸಬೇಕೆಂದು ಶಾಲಾ ಮುಖ್ಯಾಧ್ಯಾಪಕರು, ಅವರು ಮೂರನೇ ವರ್ಷ ಟ್ರೇಂಡ್ ಆದವರು, ಹಳಗನ್ನಡವನ್ನು ಅವರು ಬಹಳ ಓದಿಕೊಂಡವರು, ಪಂಪ-ರನ್ನರ ಮೇಲೆ ಬೇಕಾದಷ್ಟು ವಿದ್ವತ್ತುಳ್ಳವರು. ಇಂಥವರು ನನ್ನನ್ನು ಕರೆಯಿಸಿ ಈ ‘ಹಕ್ಕಿ ಹಾರುತಿದೆ’ ಇದನ್ನೇನು ಕಲಿಸಬೇಕು ? ಹ್ಯಾಗೆ ಕಲಿಸ ಬೇಕಿದನ್ನು ?

ಹಕ್ಕಿ-ಹಕ್ಕಿ, ಹಾರುತಿದೆ-ಹಾರುತಿದೆ, ನೋಡಿದಿರಾ-ನೋಡಿದಿರಾ, ಇದರಲ್ಲಿ ಶಿಕ್ಷಕನ ಕೆಲಸ ಏನೂ ಇಲ್ಲವೇ ಇಲ್ಲ, ಇದರಲ್ಲಿ ಏನು ಕಲಿಸಬೇಕು ? ಎಂದರು.

ನಾನೆಂದೆ-ಮಾಸ್ತರೇ, ನಾನೇ ಕಲಿಸುತ್ತೇನೆ, ಪಗಾರ ಕೊಡದಿದ್ದರೂ ಅಷ್ಟೇ ಹೋಯ್ತು ಎಂದು ಹೇಳಿ, ಕ್ಲಾಸಿನಲ್ಲಿ ಹಕ್ಕಿ ಎಂದರೆ ಬರೀ ಹಕ್ಕಿ ಅಲ್ಲಪ್ಪಾ ಕಾಲದ ಬಗೆಗೆ ಒಂದು ಸಂಕೇತ. ನಮ್ಮ ಆಧುನಿಕ ಕಾಲದ ಕವಿಗಳಿಗೆ ಕಾಲದ ಒಂದು ಪ್ರಜ್ಞೆ ಇರುತ್ತದೆ. ಹೊತ್ತಿನ ಬಗೆಗೆ ವಿಚಾರ, ಚಿಂತನವಿರುತ್ತದೆ. ಇದೇ ಕವಿತೆಯನ್ನು ಈ ಕಾಲದ ಪ್ರತೀಕವಾಗಿ ಅರ್ಥ ಮಾಡಿ ಹೇಳಿದಾಗ "ಹೇ-ಇದರಾಗ ಸ್ವಲ್ಪ ಅರ್ಥ ಇದ್ದಾಂಗ ಅದಽಽ" ಅಂತ ಮಾಸ್ತರರು ಹೇಳಿದರು.

ಈ ಮಾತನ್ನು ಯಾಕೆ ಹೇಳುತ್ತೇನೆಂದರೆ ಅವತ್ತಿನ ಪರಿಸ್ಥಿತಿಗೂ ಇವತ್ತಿನ ಪರಿಸ್ಥಿತಿಗೂ ಬಹಳ ಅಂತರವಿಲ್ಲ. ನಮ್ಮಲ್ಲಿ ವಿಮರ್ಶೆ ಇಷ್ಟು ಬೆಳೆದರೂ ಕೂಡ "ಹಕ್ಕಿ ಹಾರುತಿದೆ ನೋಡಿದಿರಾ" ಅನ್ನೋ ಕವನವನ್ನು ಇತ್ತೀಚೆಗೆ ಬೇಂದ್ರೆಯವರ ಬಗೆಗೆ ಒಂದು ಪುಸ್ತಕ ಬರೆದ ಪಂಡಿತರು ಇದಕ್ಕೆ ಸೂರ್ಯ, ಚಂದ್ರ ಎರಡು ಕಣ್ಣು ಅಂದರೆ ಏನು ? ಸೂರ್ಯ, ಚಂದ್ರ ಒಟ್ಟಿಗೆ ಇರುವದಕ್ಕೆ ಹೇಗೆ ಸಾಧ್ಯವಿದೆ ? ಇದು ಮುಂದೂ ಹೋಗುತ್ತದೆ, ಹಿಂದೂ ಹೋಗುತ್ತದೆ, ಸುತ್ತಲೂ ಹೋಗುತ್ತದೆ ಅಂದರೆ ಏನು ? ಇದೆಲ್ಲ ಅಸಂಬದ್ಧ ಎನ್ನುವ ಅರ್ಥದಲ್ಲಿ ಬರೆದರು. ಇದಕ್ಕೆ ಮುಖ್ಯ ಕಾರಣವೇನೆಂದರೆ, ಇವರಿಗೆ ಗೊತ್ತಿದೆ, ಈ ಹಕ್ಕಿ ಕಾಲದ ಸಂಕೇತ ಎನ್ನುವದನ್ನು ಈ ಪಂಡಿತರು ಓದಿದ್ದಾರೆ. ಆದರೂ ಕೂಡ ಈ ಹಕ್ಕಿ ಸಾಮಾನ್ಯ ಹಕ್ಕಿ ಅಲ್ಲ ಇದೊಂದು ವಿಲಕ್ಷಣವಾದಂಥ ಹಕ್ಕಿ, ನಾವು ನೋಡುವ ಕಾಗೆ-ಗುಬ್ಬಿ ಅಲ್ಲ. ಅದರ ಸಂಕೇತವನ್ನು ವಿಲಕ್ಷಣವಾಗಿ ಕವಿಯು ಉಪಯೋಗಿಸುತ್ತಾನೆ ಎನ್ನುವ ಪ್ರಜ್ಞೆ ಇವರಿಗಿಲ್ಲ. ಆದ್ದರಿಂದ ವಿಮರ್ಶಕನೆಂದರೆ ಯಾರು ? ಒಂದು ಕವಿತೆಯನ್ನು ಒಳ್ಳೆಯ ರೀತಿಯಿಂದ ಶಕ್ತಿಯುತವಾಗಿ ಓದುವಂಥವ ; ಅದಕ್ಕೆ ವಿದ್ವತ್ತು ಬೇಕಾಗುತ್ತದೆ, ಸಾಹಿತ್ಯವನ್ನು ಓದಿದ ಅನುಭವ ಬೇಕಾಗುತ್ತದೆ ಮತ್ತು ಈ ಅನುಭವವನ್ನು ಮಾತಿನಲ್ಲಿ ಒಡಮೂಡಿಸುವ ಶಕ್ತಿ ಕೂಡ ಅವನಿಗೆ ಬೇಕಾಗುತ್ತದೆ. ಅಂಥವನೇ ವಿಮರ್ಶಕ. ಅಂಥ ಒಬ್ಬ ವಿಮರ್ಶಕನ ಅಗತ್ಯತೆ ನಮಗೆ ಇಂದು ಇದೆ.

ಇನ್ನೂ ಒಂದು ಮಾತು ಹೇಳಬೇಕು : ಇವತ್ತಿನ ದಿನ ಶಿವರುದ್ರಪ್ಪನವರು ಕಣವಿಯವರು ತಮ್ಮ ಕವಿತೆಗಳಿಗೆ ಹಿನ್ನಲೆಯಾಗಿ ತಮ್ಮ ವೈಯಕ್ತಿಕ ಅನುಭವಗಳನ್ನು ಕಾವ್ಯದಲ್ಲಿ ಬರುವ ಮುಖ್ಯ ವಸ್ತು, ಶೈಲಿಗಳನ್ನು ನಮ್ಮೆದುರಿಗೆ ಇಟ್ಟರು. ಆದರೆ ಎಷ್ಟೋ ಸಲ ಕವಿತೆಗೂ ಕವಿಯ ಅನುಭವಕ್ಕೂ ಸಂಬಂಧವೇ ಇರುವದಿಲ್ಲ. ಏನಾಗುತ್ತದೆಯೆಂದರೆ-ಕವಿಯ ಮನಸ್ಸಿನಲ್ಲಿ, ಅವನ ಪ್ರತಿಭೆಯಲ್ಲಿ ಏನೇನೋ ಸೇರಿಕೊಂಡು ಒಂದು ಕವಿತೆಯಾಗುವದು. ಹೀಗೆ ಆದಾಗ ಅದರ ಅರ್ಥವನ್ನು ಕವಿಯ ಅನುಭವವನ್ನು ನೋಡಿಕೊಂಡು ಹೇಳಲಿಕ್ಕೆ ಆಗುವದಿಲ್ಲ. ಇದಕ್ಕೊಂದು ಉದಾಹರಣೆಯನ್ನು ಏನು ಹೇಳಬಹುದು ? ಬೇಂದ್ರೆಯವರ "ಕುಣಿಯೋಣು ಬಾರ"

ಅನ್ನೋ ಕವಿತೆಯನ್ನು ತಾವು ಕೇಳಿರಬಹುದು. ಈಕವಿತೆಯ ಹಿನ್ನೆಲೆಯನ್ನು ಬೇಂದ್ರೆಯವರು ವಿವರಿಸಿದ್ದಾರೆ. ಏನಾಯ್ತು ಎಂದರೆ ಒಂದು ದಿವಸ ಅವರು (ಬೇಂದ್ರೆಯವರು) ತಮ್ಮ ಹೆಂಡ್ತಿಯೊಂದಿಗೆ ಜಗಳಾಡಿದರು. (ಆದೇನೂ ದೊಡ್ಡ ವಿಷಯ ವಲ್ಲ, ಎಲ್ಲರೂ ಜಗಳಾಡುತ್ತಾರೆ) ಜಗಳಾಡಿದಾಗ ಹೆಂಡ್ತಿಗೆ ಬಹಳ ಸಿಟ್ಟು ಬಂದು—ಅವರೊಂದು ಹಾಸಿಗೆ ಮೇಲೆ ಮಲಗಿಕೊಂಡರು! ಇವರೂ ಹೋಗಿ ಮತ್ತೊಂದು ಹಾಸಿಗೆ ಮೇಲೆ ಮಲಗಿಕೊಂಡರು !! (ಅಂದರೆ ಅವರು ಎಲ್ಲಿ ಮಲಗಬೇಕಾಗಿತ್ತೆಂದು ನಿಮಗೆ ಗೊತ್ತಿದೆ) ಆಗ ಕಿಟಕಿಯಲ್ಲಿ ಗಾಳಿ ಬೀಸ್ತಾ ಇತ್ತು, ಆ ಗಾಳಿಗೆ ಎಲೆ ಅಲ್ಲಾಡ್ತಿತ್ತು. ಬೇಂದ್ರೆಯವರಿಗೆ ಅವಾಗ ಏನು ಅನ್ನಿಸಿತು ಎಂದರೆ—"ನಾ ಒಲ್ಲೆ, ನಾ–ಒಲ್ಲೆ–ಕುಣೀಲಿಕ್ಕ ಒಲ್ಲೆ" ಅಂತ ಎಲೆ ಅನ್ನುತ್ತದಂತೆ. ಅದಕ್ಕೆ ಇವರು (ಬೇಂದ್ರೆಯವರು) Persuade (ಸಮಾಧಾನ) ಮಾಡಲಿಕ್ಕೆ ಸವಿಮಾತಿನಲ್ಲಿ "ಕುಣಿಯೋಣು ಬಾರ, ಕುಣಿಯೋಣು ಬಾರ" ಅಂತ ಕರೆದರು. ಇವತ್ತು ನಾವು ಓದ ಬೇಕಾದರೆ ಆದರಂತಹ ಪ್ರೇಮಗೀತೆ ಬೇರೆ ಇಲ್ಲ.

"ಹದಿನಾಲ್ಕು ಲೋಕಕ್ಕೆ ಚಿಮ್ಮಲಿ ಈ ಸುಖ". ಈ ಹದಿನಾಲ್ಕು ಲೋಕಕ್ಕೆ ಚಿಮ್ಮಲಿರುವ ಸುಖಕ್ಕೆ ಹಿನ್ನೆಲೆ ಏನು ? — ಅದೇ ಗಂಡ–ಹೆಂಡಿರ ಜಗಳ ! ಈ ಜಗಳ ಗಂಧ ತೀಡಿದ ಹಾಗೆ ಇರಬಹುದು. ಆದರೆ ಆವಾಗಲೇ ಅನ್ನಿಸುವದಿಲ್ಲ. ಅವರಿಗೆ (ಬೇಂದ್ರೆಯವರಿಗೆ) ಹೆಂಡತಿಯನ್ನು ಕರೆಯುವ ಹಾಗಿಲ್ಲ ; ಯಾರಿಗೆ ಹೇಳ ಬೇಕು ಇದನ್ನು ? ಅದಕ್ಕೆ "ಕುಣಿಯೋಣು ಬಾರ" ಎಂದು ಕವಿತೆ ಬರೆದರು. ಈ ಮಾತನ್ನು ಯಾಕೆ ಹೇಳುತ್ತೇನೆಂದರೆ, ಈ ಕವಿತೆ ಎನ್ನುವದು ನಮ್ಮೆದುರು ದೇಹ ಧರಿಸಿ [ಶಬ್ದದಲ್ಲಿ, ಆಕಾರದಲ್ಲಿ] ಇರುತ್ತದೆ. ಆ ಕವಿತೆಗೂ ಆ ಕವಿಯ ಅನುಭವಕ್ಕೂ ಅಂದರೆ ಆಗಿನ ಅನುಭವಕ್ಕೆ [ಕವಿಯ ಅನುಭವಕ್ಕೂ ಇದಕ್ಕೂ ಸಂಬಂಧ ವಿಲ್ಲವೆಂದಲ್ಲ] ಆ ಒಂದೇ ಅನುಭವಕ್ಕೆ ಇದು ಸಂಬಂಧವಿರುವದಿಲ್ಲ. ಅವರಲ್ಲಿ ಏನೇನು ಸಾಮಗ್ರಿ–ಸರಕು ಕಲೆತು ಬೀಳುತ್ತದೆ ಎಂದು ಹೇಳಲಿಕ್ಕೆ ಆಗುವದಿಲ್ಲ. ಒಟ್ಟು ಕವಿಯ ಪ್ರತಿಭೆ ಎಷ್ಟು ದೊಡ್ಡದಿರುವದೋ ಅಷ್ಟು ಸಾಮಗ್ರಿಯನ್ನು ಅವರ ಕವಿತೆ ಒಳಗೊಳ್ಳುತ್ತದೆ ಎನ್ನುವ ಮಾತನ್ನು ನೆನಪಿಡಬೇಕು. ಆದರೂ ಕೂಡ ಒಬ್ಬ ಕವಿ ತನ್ನ ಬೆಳವಣಿಗೆಯ ಬಗೆಗೆ ಮಾತನಾಡಿದಾಗ, ತನ್ನ ಕಾವ್ಯದ ಬಗೆಗೆ ಮಾತು ಗಳನ್ನು ಹೇಳಿದಾಗ ಅದು ಯಾವಾಗಲೂ ಸ್ವಾಗತಾರ್ಹವೇ. ಯಾಕೆಂದರೆ ಎಲ್ಲಿಯೋ ಒಂದು ಕಡೆ ನಮಗೆ ಬೆಳಕು ಬೀಳದೇ ಅವರು ಹೇಳಿದ್ದು ಅರ್ಥ ವಾಗಿಲ್ಲವೆಂದರೂ ಕೂಡ ಅವರು ಹೇಳಿದ ಆ ಸಂಗತಿಗಳು ಎಲ್ಲಿಯೋ ಒಂದು ಕಡೆ ಜೋಡಿಸಿಕೊಂಡು ಕವಿ–ಕಾವ್ಯದ ಅರ್ಥವಾಗಬಹುದು. ಈ ಭಾವನೆ ನನಗೂ ಇದೆ. ಆ ದೃಷ್ಟಿಯಿಂದ ಇವರ ಮಾತುಗಳನ್ನು ಕೇಳಿ ಆನಂದ ಪಟ್ಟಿದ್ದೇನೆ. ಅದಕ್ಕೂ

ಹೆಚ್ಚಾಗಿ ಅವರು ಕವಿತೆಗಳನ್ನು ನಮ್ಮೆದುರಿಗೆ ಏನು ಅಂದು ತೋರಿಸಿದರಲ್ಲ ? ಅದು ಬಹಳ ಅಪರೂಪದ ಒಂದು ಅನುಭವ ಎಂದು ನನಗನಿಸಿತು.

ಶಿವರುದ್ರಪ್ಪ ಮತ್ತು ಕಣವಿ ಎಂಬ ಈ ಹೆಸರುಗಳು ಎಷ್ಟರ ಮಟ್ಟಿಗೆ ಹೊಂದಿಕೊಂಡಿವೆಯೆಂದರೆ ಯಾರು ಶಿವರುದ್ರಪ್ಪ, ಯಾರು ಕಣವಿ ಎಂದು ಹೇಳು ವದೂ ಕೆಲವರಿಗೆ ಕಠಿಣ ಆಗಬಹುದು. ಅಷ್ಟರ ಮಟ್ಟಿಗೆ ಅವರು ಸಾಮ್ಯತೆ ಹೊಂದಿಬಿಟ್ಟಿದ್ದಾರೆ. ಇದರಿಂದ ಕೆಲವು ಅನುಕೂಲತೆಗಳು ನಮಗಿವೆ. ಅದನ್ನು ಅಲ್ಲಗಳೆಯಲಾಗುವದಿಲ್ಲ. ಅವರಿಬ್ಬರಲ್ಲಿ ಅನೇಕ ಸಾಮ್ಯಗಳಿವೆ, ಸ್ವಭಾವದಲ್ಲೂ ಕೂಡ. ಇಬ್ಬರೂ ಬಹಳ ಸ್ನೇಹ ಜೀವಿಗಳು. ಅದೇ ರೀತಿ ನಾಲ್ವತ್ತು ವರ್ಷ ಕ್ಕಿಂತ ಹೆಚ್ಚಿನ ಕಾಲದವರೆಗೆ ತಮ್ಮ ಸೃಜನಾತ್ಮಕತೆಯನ್ನು ಉಳಿಸಿಕೊಂಡು ಬಂದಿ ದ್ದಾರೆ. ಅದು ಬಹಳ ಮಹತ್ವದ ಮಾತು. ಕವಿತೆಯನ್ನು ಬರೆಯುದವರೇ ಇಲ್ಲ, ಸಾಮಾನ್ಯವಾಗಿ. ತಾರುಣ್ಯದಲ್ಲಿ, ಬಾಲ್ಯದಲ್ಲಿ ನಾನೂ ಬರೆದಿರುತ್ತೇನೆ. ಕವಿತೆಗಳನ್ನು ಬರೆಯದಿರುವದೇ ಕೆಲಸಲ ಅಪಹಾಸ್ಯವೆನಿಸುತ್ತದೆ. ಯಾವನೋ ಒಂದು ವಯಸ್ಸಿಗೆ ಇದು ಕಮರಿ ಹೋಗುತ್ತದೆ. ಇದು (ಸೃಜನಾತ್ಮಕತೆ) ತಾರುಣ್ಯದಲ್ಲಿ ಸಹಜವಾಗಿರುವಷ್ಟು ಮುಂದೆ ಅದನ್ನು ಉಳಿಸಿಕೊಂಡು ಬರುವದು ಬಹಳ ಕಠಿಣ. ಹೇಗೆ ಕೆಲವರು ಮುದುಕರಾಗುವದಿಲ್ಲವೋ ಹಾಗೆ ನೆಹರೂರವರಿಗೆ ಹೇಗೆ ಚಿರ ಯುವಕರೆಂದು ಕರೆಯುತ್ತಿದ್ದರೋ ಹಾಗೆ. "ನೆಹರೂ ನಿವೃತ್ತರಾಗುವದಿಲ್ಲ" ಎಂಬ ಕವಿತೆಯನ್ನು ಅಡಿಗರು ಬರೆದರು. ನಿವೃತ್ತರಾಗುವದಿಲ್ಲವೇಕೆ ಎಂದರೆ, ಅವರು ನಿವೃತ್ತಿಯ ವಯಸ್ಸಿಗೆ ಬಂದಿರುವದಿಲ್ಲ.

ಶಂ. ಬಾ. ಜೋಶಿಯವರನ್ನು ಅವರ ೯೫ನೇ ಹುಟ್ಟುಹಬ್ಬದಂದು ಭೇಟಿ ಯಾದೆವು. ಅವರಿಗೆ ೯೫ನೇ ವಯಸ್ಸಿಗೆ ನಾನು ಹೇಳಿದ ಮಾತೆಲ್ಲ ಕೇಳಿಸುತ್ತಿತ್ತು. ಚಾಳೀಸು ಉಪಯೋಗಿಸದಿದ್ದರೂ ಕಾಣಿಸುತ್ತಿತ್ತು. ಇನ್ನೊಂದು ಶಾಕ್ ನನಗೆ ಕೊಟ್ಟಿದ್ದೇನೆಂದರೆ ಮೊನ್ನೆ ತಾನೆ ನನ್ನ ಪುಸ್ತಕ ತರಿಸಿಕೊಂಡಿದ್ದರು. ''ನಾನು ಪುಸ್ತಕ ಓದಿದೆ, ಬಹಳ ಚೊಲೋ ಇತ್ತು'' ಎಂದರು. ನಾನು ''ಯಾಕೆ ಓದಾಕ ಹೋಗಿದ್ದಿರಿ'' ಎಂದೆ. ೯೫ನೇ ವಯಸ್ಸಿಗೆ ನಾನೇನೂ ಯಾರ ಪುಸ್ತಕ ಓದೂ ಹಾಗಿಲ್ಲ (ಬಹುಶಃ ಅಷ್ಟು ದಿವಸ ಬದುಕಿದ್ದರೆ). ೯೫ನೇ ವಯಸ್ಸಿಗೆ ಕೂಡ ಇವತ್ತು ಬಂದ ಒಂದು ಪುಸ್ತಕ ಓದಬೇಕು ಎನ್ನುವ ಲವಲವಿಕೆ ಇದೆಯಲ್ಲ, ಕುತೂಹಲ ಜಿಜ್ಞಾಸೆ ಇದೆಯಲ್ಲ ಇದು ಬಹಳ ಮಹತ್ವದ್ದು, ಇದು ತಾರುಣ್ಯ. ತಾರುಣ್ಯ ಒಂದು ಅವಸ್ಥೆ, ಮನೋಸ್ಥಿತಿ. ಆ ರೀತಿ ಸೃಜನಾತ್ಮಕತೆಯನ್ನು ಇಬ್ಬರೂ ಇವತ್ತಿನವರೆಗೆ ಉಳಿಸಿಕೊಂಡು ಬಂದಿರುವದೇ ಒಂದು ದೊಡ್ಡ ಸಾಧನೆ ಎಂದು

ನಾನು ಹೇಳುತ್ತೇನೆ. ಇದು ಎಷ್ಟೇ ದೊಡ್ಡ ಕವಿ ಇದ್ದರೂ ಆಗುವದಿಲ್ಲ. ಅವರ ಸೃಜನಾತ್ಮಕತೆಗೆ ಒಂದು ಕೊನೆ ಬರುತ್ತದೆ. ಅವರು ಆಗ ಬೇರೆ ಮಾರ್ಗವನ್ನು ಹಿಡಿಯಬಹುದು, ಬಿಟ್ಟು ಬಿಡಬಹುದು.

ಟಿ. ಎಸ್. ಈಲಿಯಟ್ ''ಫೋರ್ ಕ್ವಾರ್ಟೆಟ್ಸ್'' ಬರೆದ ನಂತರ ಒಂದು ಕವಿತೆ ಬರೆದ ಅಷ್ಟೇ. ಆಮೇಲೆ ಯಾವ ಕವಿತೆಯನ್ನೂ ಬರೆಯಲಿಲ್ಲ. ಇಂಥ ಒಂದು ಸ್ಥಿತಿ ನಮ್ಮ ಕವಿಗಳಿಗೆ ಬಂದಿಲ್ಲ. ಬರಬಾರದೆಂದು ನಾನು ಆಶಿಸುತ್ತೇನೆ. ಇತ್ತೀಚಿನ ಕವಿತೆಗಳನ್ನು ಒದಿದಾಗಲೂ ಕೂಡ ಕಣವಿಯವರ "ಜೀನಿಯಾ" ಸಂಗ್ರಹವಾಗಲಿ, ಶಿವರುದ್ರಪ್ಪನವರ ''ಪ್ರೀತಿ ಇಲ್ಲದ ಮೇಲೆ'' ಆಗಲಿ, ಇತ್ತೀಚಿನ ಸಂಗ್ರಹದ ಕವಿತೆಗಳನ್ನು ನೋಡಿದಾಗಲೂ ಕೂಡ ಇವರು ಇನ್ನೂ ಬೆಳೆಯುತ್ತಿರುವ ಕವಿ ಎಂದೆನಿಸುತ್ತದೆಯೇ ಹೊರತಾಗಿ ಇವರ ಪ್ರತಿಭೆ ಕುಂದಿದೆ, ಇವರ ವಾಕ್ ಶಕ್ತಿ ಹ್ರಾಸವಾಗಿದೆ ಎಂದು ಅನ್ನಿಸುವದಿಲ್ಲ. ಇದು ಬಹಳ ಮಹತ್ವದ ಸಂಗತಿ.

ಇನ್ನೂ ಅನೇಕ ಸಾಮ್ಯಗಳನ್ನು ಹುಡುಕಬಹುದು. ಈ ಹಿಂದೆ ಎರಡು ದಿನಗಳ ಭಾಷಣಗಳೇನಾದವು ನನಗೆ ಗೊತ್ತಿಲ್ಲ. ಆದರೆ ಇಂಥ ಅನೇಕ ಸಾಮ್ಯಗಳನ್ನು ವಿಮರ್ಶಕರು ಗುರ್ತಿಸಿರಬಹುದು.

ಇಬ್ಬರೂ ಒಂದೇ ತರಹದ ಕವನ ಬರೆದದ್ದುಂಟು : "ಬಿಸ್ಮಿಲ್ಲಾರ ಶಹನಾಯಿ ವಾದನ ಕೇಳಿ"– ಎಂದು ಕಣವಿಯವರು ಓದಿದರು; "ಕೊಳಲು" ಕವಿತೆಯನ್ನು ಶಿವರುದ್ರಪ್ಪನವರು ಬರೆದಿದ್ದಾರೆ. ಗೆಳೆಯರು, ಗೆಳೆಯರ ಮೇಲೆ ಕವಿತೆಗಳನ್ನು ಬರೆದಿದ್ದಾರೆ. ಕಾಲದ ಮೇಲೆ "ಕಾಲ ನಿಲ್ಲುವದಿಲ್ಲ" ಎಂದು ಕವಿತೆಯನ್ನು ಕಣವಿಯವರು ಬರೆದರೆ, "ಗಡಿಯಾರದಡಿಯಲ್ಲಿ" ಎಂದು ಶಿವರುದ್ರಪ್ಪನವರು ಬರೆದಿದ್ದಾರೆ. ಈ ರೀತಿ ಅದೇ ವಸ್ತುವಿನ ಬಗ್ಗೆ, ಅದೇ ಅನುಭವದ ಬಗ್ಗೆ ಈ ಇಬ್ಬರೂ ಕವಿಗಳು ಬರೆದಿದ್ದಾರೆ. ಅವರ ಬೆಳವಣಿಗೆ, ವಿಕಾಸದಲ್ಲಿಯೂ ಕೂಡ ನಮಗೆ ಒಂದೇ ವಿಧವಾದ ಕ್ರಮ ಕಾಣಿಸುತ್ತದೆ. ಉದಾಹರಣೆಗೆ– ಶಿವರುದ್ರಪ್ಪನವರು ಹಾಗೂ ಕಣವಿಯವರು ಕಾವ್ಯಾರಂಭ ಮಾಡಿದ್ದು ಉಪಮೆಯ ಉಪಯೋಗದಿಂದ ರೂಪಕಕ್ಕೆ; ರೂಪಕದಿಂದ, ಸಂಕೇತಕ್ಕೆ; ಸಂಕೇತದಿಂದ, ಒಟ್ಟು ಕಾವ್ಯ ಶಿಲ್ಪಕ್ಕೆ ಅವರ ಕಾವ್ಯ ವಿಕಾಸಗೊಳ್ಳುತ್ತ ನಡೆದಿದೆ. ಇವರ ಅನೇಕ ಘಟ್ಟಗಳನ್ನು ವಿಮರ್ಶಕರು ಗುರ್ತಿಸುತ್ತಾ ನಡೆದಿದ್ದಾರೆ. ನಾವೂ ಕೂಡ ಕವಿತೆಯನ್ನೋದುವ ಸಂದರ್ಭದಲ್ಲಿ ಗುರ್ತಿಸಬಹುದು. ಆದರೆ ಹೇಗೆ ಇವರಿಬ್ಬರ ನಡುವಿನ ಸಾಮ್ಯವನ್ನು ಗುರ್ತಿಸುವದು ಅಗತ್ಯವೋ ಅದೇ ರೀತಿ ಒಬ್ಬ ಕವಿ ಮತ್ತೊಬ್ಬ ಕವಿಯ ಹಾಗೆ ಇರುವದಿಲ್ಲ. ಅನುಕರಣ ಎನ್ನುವದು ಸಾಧ್ಯವೇ ಇಲ್ಲ.

ನಾನು ಉದ್ದೇಶಪೂರ್ವಕವಾಗಿ ಒಬ್ಬರನ್ನು ಅನುಕರಣೆ ಮಾಡಿದರೂ ಕೂಡ ಅದು ಅನುಕರಣ ಆಗುವದಿಲ್ಲ. ಎಷ್ಟರ ಮಟ್ಟಿಗೆ ನಾನು ಅನುಕರಣ ಮಾಡಬಹುದು? ಇನ್ನೊಬ್ಬರ ಹಾಗೇ ಕಾಣಲಿಕ್ಕೆ ನನಗೆ ಸಾಧ್ಯವಿಲ್ಲ.ಕವಿಗಂತೂ ಇದು ಸಾಧ್ಯವೇ ಇಲ್ಲ.

ಕವಿ ಎಷ್ಟೇ ಪ್ರಭಾವಗಳನ್ನು ಅರಗಿಸಿಕೊಂಡರೂ ಸಹ ಅವನು ತಾನೇ ತಾನಾಗಿ ಉಳಿಯಬೇಕಾದವನು. ಅವನಿಗೆ ತನ್ನದೇ ಆದ ಧ್ವನಿ ಬೇಕಾಗಿರುತ್ತದೆ. ಆ ಧ್ವನಿಯನ್ನು ಸಾಧಿಸುವ ತನಕ ಅವನಿಗೆ ಸಮಾಧಾನವೇ ಇರುವದಿಲ್ಲ. ಆ ಧ್ವನಿಯನ್ನು ಸಾಧಿಸಿದ ಮೇಲೆ ಅದನ್ನು ಉಳಿಸಿ ಬೆಳಸಿ ಸಮೃದ್ಧಿಮಾಡುವದು ಅವನ ಕರ್ತವ್ಯ. ಇಂತಹ ಕರ್ತವ್ಯವನ್ನು ಈ ಇಬ್ಬರು ಕವಿಗಳು [ಜಿ. ಎಸ್. ಎಸ್. ಮತ್ತು ಕಣವಿಯವರು] ಮಾಡಿದ್ದಾರೆ. ನನ್ನ ಮಟ್ಟಿಗಂತೂ ಶಿವರುದ್ರಪ್ಪನವರು ಮತ್ತು ಕಣವಿಯವರ ಕವಿತೆಗಳನ್ನು ಕನ್‌ಫ್ಯೂಜ್ ಮಾಡುವಂತಹ ಪರಿಸ್ಥಿತಿಯಂತೂ ಇಲ್ಲ. ಶಿವರುದ್ರಪ್ಪನವರ ಕವಿತೆಯಂತೇ ಕಣವಿಯವರ ಕವಿತೆ ಎಂದು ನನಗೆ ಅನ್ನಿಸುವದೇ ಇಲ್ಲ.

ಕಣವಿಯವರ ಕವಿತೆ ಶಿವರುದ್ರಪ್ಪನವರ ಕವಿತೆ ಇವೆರಡರಲ್ಲಿ ಮೂಲಭೂತವಾದ ಭಿನ್ನತೆಗಳಿವೆ. ಅದನ್ನು ಪಟ್ಟಿಮಾಡಿ ಹೇಳುವದಾದರೆ ಮೂರು ಮಟ್ಟ [ಲೆವಲ್] ಗಳಲ್ಲಿ ಇವರನ್ನು ಗುರ್ತಿಸ ಬಹುದು. ಮೊದಲನೇದ್ದು ಪ್ರಜ್ಞಾಸ್ತರದಲ್ಲಿ. ಮುಖ್ಯವಾಗಿ ಸ್ವತಃ ಕಣವಿಯವರೇ ಹೇಳುವ ಹಾಗೆ ಅವರ ಪ್ರಜ್ಞೆ 'ಜಾನಪದ ಪ್ರಜ್ಞೆ'. ಅಂದರೆ ಇದರರ್ಥ ಅತ್ಯಂತ ಶಿಷ್ಟಮಯವಾದ ಕಾವ್ಯವನ್ನು ರಚಿಸಿಲ್ಲವೆಂತಲ್ಲ. ಅವರ sonnet ಗಳನ್ನು [ಸುನೀತಗಳನ್ನು] ನೋಡಿದರೆ ಅದು ಜಾನಪದ ಶಿಷ್ಟ ಕಾವ್ಯ ಅಲ್ಲ. ಕಾವ್ಯ ಇಲ್ಲವೆಂದಲ್ಲ, ಆದರೆ ಮುಖ್ಯವಾಗಿ ಅವರು ಜಾನಪದ ಪ್ರಜ್ಞೆಯ ಕವಿ. ಸಾಮಾಜಿಕ ವಿಶ್ಲೇಷಣೆಯಾಗಲಿ, ಭಾವಗಳ ಮಂಡನೆಯಾಗಲಿ, ಶಿಶುವಿನ ಬಗೆಗಾಗಲಿ ಪ್ರೀತಿ ಪ್ರೇಮದ ಬಗೆಗೆ ಬರೆಯಲಿ ಅಲ್ಲಿ ಈ ಜಾನಪದ ಪ್ರಜ್ಞೆ ಅದರ ಹಿಂದೆ ಕೆಲಸ ಮಾಡುತ್ತಿರುತ್ತದೆ. ಅವರ ಕವಿತೆಗಳ ಸೌಂದರ್ಯವೇನಿದೆಯಲ್ಲ ಅದು ನಮ್ಮ ಜಾನಪದ ಕಾವ್ಯದ ಹಿಂದಿನ ಸೌಂದರ್ಯವೇ. ಜಾನಪದ ಕಾವ್ಯವೆಂದೊಡನೆಯೇ ಅದು ಬಳವಾಹಳ ಸರದ ಕಾವ್ಯವೆಂದು ತಿಳಿದುಕೊಳ್ಳಬಾರದು. ಜಾನಪದ ಕಾವ್ಯ ಗಳನ್ನು ಅರ್ಥ ಮಾಡಿಕೊಳ್ಳವಲ್ಲಿರುವಂತಹ ಕ್ಲಿಷ್ಟತೆ ಬೇರೆ ಕಾವ್ಯಗಳಿಗೆ ಇಲ್ಲ, ಅದು ಸಹಜವಾಗಿ ಬಂದ ಕಾವ್ಯ. ಆ ಸಹಜ ಗತಿ ಕಣವಿಯವರ ಕಾವ್ಯದಲ್ಲಿದೆ.

ಶಿವರುದ್ರಪ್ಪನವರ ಪ್ರಜ್ಞೆ ಏನಿದೆ ಎಂದರೆ ಅವರು ನಮ್ಮ ಹಾಗೆ ಹಳ್ಳಿಯಿಂದಲೇ ಬಂದಿರಬಹುದು, ಆದರೆ ಅವರ ಪ್ರಜ್ಞೆ ಮುಖ್ಯವಾಗಿ 'ನಾಗರ ಪ್ರಜ್ಞೆ'

ಎಂದು ಹೇಳಬಹುದು. ಅಂದರೆ ನಗರ ಪ್ರಜ್ಞೆ. ಅಲ್ಲಿ ಬುದ್ಧಿಯ ಅಂಶ ಹೆಚ್ಚು, ಯಾವುದೇ ಒಂದು ವಿಶ್ಲೇಷಣೆ, ಒಂದು ವಸ್ತುವನ್ನು ಎಲ್ಲ ದಿಕ್ಕುಗಳಿಂದ ನೋಡುವಾಗ ಆಕಾಂಕ್ಷೆ ಹೆಚ್ಚು. ಬಹುಶಃ ಇವರಿಬ್ಬರೂ ಬೆಳೆದು ಬಂದ ಪ್ರಭಾವವಲಯಗಳು ಬೇರೆ ಇರುವದರಿಂದ ಈ ರೀತಿ ಘಟಿಸಿರಬೇಕು. ಕಣವಿಯವರ ಕಾವ್ಯದ ಹಿನ್ನೆಲೆ ಬೇಂದ್ರೆ ಮಧುರಚೆನ್ನರು. ಅದಕ್ಕೂ ಹಿಂದೆ ಅಂದರೆ ಸರ್ವಜ್ಞ, ಹರಿಹರ ಇತ್ಯಾದಿ. ಅದೇ ರೀತಿ ಸ್ವತಃ ಶಿವರುದ್ರಪ್ಪನವರೇ ಹೇಳಿದ ಹಾಗೆ ಅವರ ಕಾವ್ಯದ ಹಿನ್ನೆಲೆ ಕುವೆಂಪು ಮತ್ತು ಕುವೆಂಪು ಪ್ರತಿನಿಧಿಸುತ್ತಿರುವ ನಗರ ಪ್ರಜ್ಞೆ. ಇದು ಬಹಳ ಸ್ಥೂಲವಾದ ವಿಂಗಡಣೆ ; ಆದರೆ ರೂಲ್ ಅಲ್ಲ. ಇದನ್ನು ಸುಳ್ಳು ಮಾಡಿಕೊಡುವ ಉದಾಹರಣೆಯನ್ನು ನಾನೇ ಕೊಡಬಲ್ಲೆ. ಆದರೆ ಮುಖ್ಯವಾಗಿ ಇಬ್ಬರನ್ನೂ ವಿಂಗಡಿಸಿ ಬೇರೆ ಬೇರೆ ನೋಡುವದಾದರೆ ಈ ರೀತಿ ನೋಡಬಹುದೆಂದು ನನಗನಿಸುತ್ತದೆ.

ಇನ್ನು ಇವರ ಕಾವ್ಯ ಮಾಧುರ್ಯದ ಬಗೆಗೂ ಒಂದು ಮಾತು ಹೇಳಬಹುದು. ಕಣವಿಯವರ ಒಲವು ಹೆಚ್ಚಾಗಿ ಗೀತದತ್ತ (ಹಾಡಿನತ್ತ). ಹಾಡು ಇಲ್ಲದ ಕವಿ ಕವೀನೇ ಅಲ್ಲ, ಆ ಮಾತು ಬೇರೆ. ಅಂದರೆ "Every poet is a singing poet". ಛಂದೋಗತಿಯನ್ನು ಬಿಟ್ಟರೆ ಕವಿತೆ ಇಲ್ಲವೇ ಇಲ್ಲ. ಆ ಅರ್ಥದಲ್ಲಿ ನಾನು ಈ ಹಾಡು ಅನ್ನುವ ಶಬ್ದವನ್ನು ಉಪಯೋಗಿಸುತ್ತಿಲ್ಲ. ಪ್ರತಿಯೊಬ್ಬ ಕವಿಯೂ ಆ ನಿಟ್ಟಿನಿಂದ ಹಾಡುವ ಕವಿಯೇ. ಆದರೆ ಶಿವರುದ್ರಪ್ಪನವರದು ಹಾಡಿಗಿಂತ ಪದ್ಯದತ್ತ ಹೆಚ್ಚು ಒಲವಿದ್ದ ಕವಿತೆ. ಅಂದರೆ ಇಲ್ಲಿ ರಚನೆ ಶಿಲ್ಪ–ಸೊಫಿಸ್ಟಿಕೇಟೆಡ್ ಅಂಶಗಳೇನಿವೆ–ಅವುಗಳತ್ತ ಇವರು ಹೆಚ್ಚು ಲಕ್ಷ್ಯ ಕೊಡುತ್ತಾರೆ.

ಇನ್ನು ಮೂರನೆಯದಾಗಿ ಇವರ ಮೌಲ್ಯದ ಬಗಗೊ ಒಂದು ಮಾತು ಹೇಳಬೇಕು. ಮುಖ್ಯವಾಗಿ ಕಣವಿಯುವರು 'ಚೆಲುವಿನ ಕವಿ' ಎಂದು ಹೇಳಬಹುದು. ಎಲ್ಲ ಕವಿಗಳಿಗೂ ಸೌಂದರ್ಯದ ಬಗೆಗೆ ಪ್ರೀತಿ ಇರುತ್ತದೆ. ಆ ಮಾತು ಬೇರೆ. ಕಣವಿಯುವರ ಕವಿತೆಗಳನ್ನು ಓದಿದಾಗ ಸ್ಫುಟವಾಗಿ ಹೊಳೆಯುವದು ಸೌಂದರ್ಯ, ಚೆಲುವು. ''ಬೇಲಿಯ ಮೇಲಿನ ನೀಲಿಯ ಹೂಗಳು'' ಬಹಳ ಸಾಮಾನ್ಯವಾದಂಥ ಒಂದು ಅಂಶ ; ನಾವು ದಿನಾಲೂ ನೋಡುತ್ತಾ ಇರುತ್ತೇವೆ. ಹೋಗಬೇಕಾದರೆ ಬೇಲಿಯ ಮೇಲಿನ ನೀಲಿಯ ಹೂಗಳನ್ನು ಕಂಡಿರುತ್ತೇವೆ. ಆದರೆ ಅದರ ಸೌಂದರ್ಯ ನಮಗೆ ಕಂಡಿರುವದಿಲ್ಲ. ಒಬ್ಬ ಎಮ್ಮೆ ಮೇಲೆ ಕುಳಿತು ಗೋಧೂಳಿಯ ಸಮಯದಲ್ಲಿ ಹೋಗುತ್ತಿರುವ ಹುಡುಗನನ್ನು ಕಂಡಾಗ ಅಲ್ಲಿ ಸಾಮಾಜಿಕ ಕಾಳಜಿ ಇತ್ಯಾದಿ ಇತ್ಯಾದಿ ಹುಡುಕಲಿಕ್ಕೆ ಹೋದರೆ ತಪ್ಪಾಗುತ್ತದೆ. ಅದು ನಮ್ಮ ಕೆಲಸವಲ್ಲ.

ಮುಖ್ಯವಾಗಿ ಅಲ್ಲಿ ದೃಷ್ಟಿ ಏನಿದೆ ಅಂದರೆ ಸೌಂದರ್ಯದೃಷ್ಟಿ. ಅಂದರೆ ಅಸುಂದರ ವಾದುದನ್ನೂ ಕೂಡ, ಸುಂದರವಾಗಿ ಕಾಣುವದು ಆ ದೃಷ್ಟಿ. ಇದು ಬಹಳ ಕಠಿಣ. ನಮಗೆಲ್ಲ ಸುಂದರವಾದದ್ದೆಲ್ಲ ಅಸುಂದರವಾಗಿಯೇ ಕಾಣುತ್ತಿರುತ್ತದೆ, ನಿಜವಾದ ಕವಿಗೆ ಅಸುಂದರವಾದುದೂ ಸುಂದರವಾಗಿಯೇ ಕಾಣಿಸುತ್ತದೆ. ಎಲ್ಲವನ್ನೂ ಸೌಂದರ್ಯಕ್ಕೆ ಪರಿವರ್ತಿಸುವದೇ ನಿಜವಾದ ಕವಿಯ ಕಾರ್ಯ. ಆ ಕಾರ್ಯವನ್ನು ಕಣವಿ ಯವರು ಸಮರ್ಥವಾಗಿ ನೆರವೇರಿಸಬಲ್ಲರು. ಆದರೆ ಶಿವರುದ್ರಪ್ಪನವರದು ಚೆಲುವಿ ಗಿಂತ ಸತ್ಯ ಎಂದೆನಿಸುತ್ತದೆ ನನಗೆ. ಇವೆರಡೂ ರಿಲೆಟಿವ್ ಟರ್ಮ್ಸ್. ಆದರೆ ಕಣವಿ ಯವರಲ್ಲಿ ಸತ್ಯ ಇಲ್ಲ, ಶಿವರುದ್ರಪ್ಪನವರಲ್ಲಿ ಚೆಲುವು ಇಲ್ಲವೆಂದಲ್ಲ. ಹಾಗೆ ಹೇಳಿದರೆ ಮೂರ್ಖರು ಅಷ್ಟೇ.

ನಾವು ಇವರಿಬ್ಬರಲ್ಲಿ ವೈಶಿಷ್ಟ್ಯವನ್ನು ಕಂಡುಕೊಳ್ಳಬೇಕಾಗುತ್ತದೆ. ಈಗ ನೋಡಿ, ಆಕಳು ಮತ್ತು ಹೋರಿ ಇವೆರಡರ ನಡುವಿರುವ ಅಂತರವೇನು ಎಂದಾಗ, ಇದಕ್ಕೂ ನಾಲ್ಕು ಅದಕ್ಕೂ ನಾಲ್ಕು ಕಾಲಿವೆ. ಇದಕ್ಕೂ ಅದಕ್ಕೂ ಒಂದು ಬಾಲ, ಎರಡು ಕೋಡು ಎಂದು ಹೇಳಿದರೆ ಇದು ಉಪಯೋಗವಿಲ್ಲದ್ದು. ಇವೆಲ್ಲ ಇರುತ್ತವೆ. ಆದರೂ ಮುಖ್ಯವಾಗಿ ಎಲ್ಲಿ ಭಿನ್ನತೆ ಇದೆ, ವೈಶಿಷ್ಟ್ಯ ಇದೆ, ಅದನ್ನು ಎತ್ತಿ ಹೇಳ ಬೇಕಾಗುತ್ತದೆ. ಈ ದೃಷ್ಟಿಯಿಂದ ನಾನು ಹೇಳುತ್ತಿದ್ದೇನೆ.

ಶಿವರುದ್ರಪ್ಪನವರ ಕವಿತೆಗಳನ್ನು ಓದುವಾಗ ನನಗೆ ಅನ್ನಿಸುವದು : ಇವರು ಸತ್ಯವನ್ನು ಹುಡುಕಿಕೊಂಡು ಹೊರಟ ಸಂಶೋಧಕರು. ಅಂದರೆ ಆ ಸತ್ಯ ಎಷ್ಟೇ ಕಟುವಾಗಿರಲಿ ಅದು ಒಬ್ಬ ವ್ಯಕ್ತಿಯ ಬಗೆಗಿರಬಹುದು, ಸಮಾಜದ್ದಿರಬಹುದು, ಸಮಸ್ಯೆಯದಿರಬಹುದು ಅಥವಾ ತಮ್ಮ ಬಗೆಗೇನೇ ಇರಬಹುದು [ವೇಳೆ ಇಲ್ಲ ನಾನು ಓದಿ ತೋರಿಸಬಹುದಾಗಿತ್ತು]. ಎಷ್ಟೋ ಕವಿತೆಗಳಲ್ಲಿ ಶಿವರುದ್ರಪ್ಪನವರ ಆತ್ಮಶೋಧನೆ ಏನಿದೆಯೋ ಅದು ನಿರ್ದಿಷ್ಟವಾಗಿ ನಡೆದ ಒಂದು ಆತ್ಮಶೋಧನೆ ಅವರ ಕವಿತೆಯಲ್ಲಿ ಕಂಡು ಬರುತ್ತದೆ. ಆ ದೃಷ್ಟಿಯಿಂದ ನಾವು ಕವಿಗಳನ್ನು ಓದು ವಾಗ ಕೇವಲ ಸಮಾನ ಅಂಶಗಳನ್ನು ಹುಡುಕಿಕೊಂಡು ಹೋದರೆ ಲಾಭವಾಗುವ ದಿಲ್ಲ. ನಮ್ಮಲ್ಲಿ ಒಂದು ಪದ್ಧತಿ ಇತ್ತು; ಕಾಳಿದಾಸ ಅಂದರೆ "Shakespeare of India" ಅಂತ. "Kalidasa is the Shakespeare of India" ಅಂತ ಹೇಳಿದರೆ ಏನು ಹೇಳಿದ ಹಾಗಾಯ್ತು ? ಇದರಿಂದ ಶೇಕ್ಸಪಿಯರ್‌ನ ಬಗೆಗಾಗಲಿ ಕಾಳಿದಾಸನ ಬಗೆಗಾಗಲಿ ಏನೂ ಹೇಳಿದಂತೆ ಆಗುವದಿಲ್ಲ. 'ಕಾಳಿದಾಸ' ಅಂದರೇನು ಅನ್ನುವದನ್ನು ಹೇಳುವದನ್ನು ಬಿಟ್ಟು "Shakespeare of India" ಎಂದು ಹೇಳಿದಂತಾಗುತ್ತದೆ. ಸಮಾನ ಅಂಶಗಳನ್ನು ಹುಡುಕಿಕೊಂಡು ಹೋಗುವವನ

ಗತಿ ಇದು. ನಿಜವಾದ ಓದುಗ ಆ ಕವಿಯ ವೈಶಿಷ್ಟ್ಯ ಕಂಡುಹಿಡಿಯಲು ಪ್ರಯತ್ನ ಮಾಡುತ್ತಾನೆ ಮತ್ತು ಆ ವೈಶಿಷ್ಟ್ಯವನ್ನು ಗ್ರಹಿಸಲು ಆ ವೈಶಿಷ್ಟ್ಯದ ಹಿನ್ನೆಲೆಯಲ್ಲಿ ಕವಿಯ ಕಾವ್ಯವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ಮಾಡುವನು. ಇದೇ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬೇಕು. ಯಾವುದೇ ಒಬ್ಬ ಶ್ರೇಷ್ಠ ಕವಿ ಅಥವಾ ಒಳ್ಳೆಯ ಕವಿ ಅಂತ ಇಟ್ಟುಕೊಂಡರೆ, ನಾವು ಅವನ ಒಂದು ಕವಿತೆಯಿಂದ ಅವನನ್ನು ಅರ್ಥ ಮಾಡಿಕೊಳ್ಳಲಿಕ್ಕೆ ಆಗುವದಿಲ್ಲ. ನೀವು ಕಣವಿಯವರ ''ಲಾಗ ಹೊಡಿಯೋ ಮಂಗ'' ಕವಿತೆ ಓದಿ ಕಣವಿಯವರ ಕಾವ್ಯದ ಅರ್ಥವಾಯ್ತು ಅಂತ ತಿಳಿದುಕೊಂಡರೆ ಅದು ನಿಮ್ಮನ್ನು ನೀವೇ ವಂಚಿಸಿಕೊಂಡ ಹಾಗೆ. ಅಂದರೆ ಯಾವದೋ ಒಂದು ಮೂಡ್‌ನಲ್ಲಿ ವಿಡಂಬನೆಯ ಧಾಟಿಯಲ್ಲಿ ಒಂದು ಉತ್ತಮ ವಾದಂಥ ಕವಿತೆ ಬರೆದರು. ಆ ಪ್ರಕಾರದಲ್ಲಿ ಅದು ಉತ್ತಮವಾದ ಕವಿತೆ. ಆದರೆ ಕಣವಿಯವರ ಕಾವ್ಯ ಸಾಮರ್ಥ್ಯದ ಅರ್ಥವಾಗಬೇಕಾದರೆ ಅವರ ಕಾವ್ಯವನ್ನು ಒಟ್ಟಿಗೆ ಓದಬೇಕು. ಅದೇ ರೀತಿ ಶಿವರುದ್ರಪ್ಪನವರ ಕಾವ್ಯವನ್ನು ಒಟ್ಟಿಗೆ ಓದಿ ದಾಗಲೇ ಆ ಕಾವ್ಯದ ನಿಜವಾದ ಅರ್ಥ ತಿಳಿಯುತ್ತದೆ.

ಒಟ್ಟಾಗಿ ಓದಿದ ಮೇಲೆ ಬಿಡಿ ಕವಿತೆ ಓದಿದರೆ ಆವಾಗ್ಗೆ ತಿಳಿಯುವ ಅರ್ಥವೇ ಬೇರೆ. ವಿದ್ಯಾರ್ಥಿಗಳು ಈ ಮಾತನ್ನು ಬಹಳ ನೆನಪಿನಲ್ಲಿಡಬೇಕು. ಈ ಕಾವ್ಯದ ಅಭ್ಯಾಸ ನಮಗೆ ಅವಶ್ಯವಾದುದು. ನಿಜವಾದ ಸಂಸ್ಕಾರವಾಗಬೇಕಾದರೆ, ಸಂಸ್ಕೃತಿ ಬೆಳೆಯಬೇಕಾದರೆ, ನಾವು ಒಂದು ಶುದ್ಧಮನಸ್ಸಿನೊಡನೆ ಸಂಪರ್ಕ ಇಟ್ಟುಕೊಳ್ಳ ಬೇಕೆಂಬ ಆಶೆ ನಿಮಗಿದ್ದರೆ ನೀವು ಕಾವ್ಯ ಓದಬೇಕು. ಅದನ್ನು ತಿಳಿಸಿಕೊಡುವದು ನಿಮ್ಮ ಶಿಕ್ಷಕರ ಕರ್ತವ್ಯವೆಂದು ನಾನು ತಿಳಿದುಕೊಂಡಿದ್ದೇನೆ.

ಕಣವಿಯವರು ಮುಂಡರಗಿಯನ್ನು ಒಂದು ಮೂಲೆ (ಪಡಮೂಲೆ) ಎಂದು ಹೇಳಿದರು. ಲಕ್ಷ್ಮೇಶ್ವರ, ಅಣ್ಣಿಗೇರೆ ಕೂಡಾ ಒಂದು ಮೂಲೆಯೇ. ದೊಡ್ಡ ದೊಡ್ಡ ಕವಿಗಳು ಬಂದಿದ್ದು ಈ ಮೂಲೆಗಳಿಂದಲೇ. ದುರ್ಗಸಿಂಹನದೂ — ಸವಡಿ ಎಂಬುದೇ. ಇವತ್ತೂ ಕೂಡ ಸವಡಿಗೆ ಹೋದರೆ ದುರ್ಗಸಿಂಹ ಇಲ್ಲಿ ಹೇಗೆ ಇದ್ದ ನೆಂದೇ ಅನ್ನಿಸುತ್ತದೆ, ಆ ಮಾತು ಬೇರೆ. ಈ ಮಾತಿಗೆ ನಿಜವಾದ ಅರ್ಥ ಕೊಡಲಿಕ್ಕೆ ಶಕ್ತರಿದ್ದವರು ನೀವು. ಇವತ್ತು ಕಣವಿಯವರು, ಶಿವರುದ್ರಪ್ಪನವರು — "ನಾನು ಮತ್ತು ನನ್ನ ಕಾವ್ಯ" ಎಂದು ಮಾತನಾಡಿದ ಹಾಗೆ ಇಂತಹದೇ ವೇದಿಕೆಯ ಮೇಲೆ ಈ ಶಾಲೆ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಒಬ್ಬರಾದರೂ ಇಂಥವರಿಂದ ಸ್ಫೂರ್ತಿ ಪಡೆದು–ಓದಬೇಕು. ಅಂತಹ ಒಂದು ಪರಿಸ್ಥಿತಿ ಬರಲಿ ! ಇದು ತನ್ನಷ್ಟಕ್ಕೆ ತಾನೇ ಬರುವದಿಲ್ಲ, ಆಕಾಶದಿಂದ ಮಳೆ ಬಿದ್ದ ಹಾಗೆ ಬರುವದಿಲ್ಲ. ಪ್ರಯತ್ನ ಮಾಡಬೇಕಾ

ಗುತ್ತದೆ. ಪ್ರಯತ್ನದ ಫಲದ ಒಂದು ಭಾಗವೆಂದರೆ — ಇಂತಹ ಕಾವ್ಯಗಳ ಗಂಭೀರ ವಾದ (ಸೀರಿಯಸ್) ಒಂದು ಅಭ್ಯಾಸ ನಿಮ್ಮಿಂದ ಆಗಲಿ ಎಂದು ಹೇಳಿ, ನಾನು ಕವಿ ಯಲ್ಲದಿದ್ದರೂ ಕೂಡ ( ಅಂದರೆ ಈ ಹಿಂದೆ ಹೇಳಿದಂತೆ ನಾನೂ ಕೆಲ ಕವಿತೆಗಳನ್ನು ಕನ್ನಡದಲ್ಲಿ, ಇಂಗ್ಲೀಷ್‌ನಲ್ಲಿ ಬರೆದಿದ್ದೇನೆ ) ಮುಖ್ಯವಾಗಿ ಬರೆದದ್ದು - ವಿಮರ್ಶೆ. (ಶಿಕ್ಷಕ-ವಿಮರ್ಶಕ ಎಂದು ನನ್ನನ್ನು ಗುರ್ತಿಸಿಕೊಳ್ಳುತ್ತೇನೆ) ಅಂತಹ ಈ ಕವಿಗಳ ಮಧ್ಯ ನನ್ನನ್ನು ಸೇರಿಸಿ ಕಣವಿಯವರಿಗೆ ಸೇತುವೆಯ ದಾರಿ ಕವಿ ಎಂದು ಹೇಳಿದರು. ಇಂಗ್ಲೀಷಿನಲ್ಲಿ " ರಾಬರ್ಟ ಬ್ರಿಡ್ಜಸ್ " ಎಂಬ ಕವಿ ಇದ್ದ ; ಅವನ ಹೆಸರೇ ಬ್ರಿಡ್ಜ. ಆಮೇಲೆ ಕಣವಿಯವರಿಗೆ ಕೆಲವರು ಸಮನ್ವಯ ಕವಿಗಳೆಂದ ಹಾಗೆ ಇವರಿಬ್ಬರೂ ಸಮನ್ವಯ ಕವಿಗಳಾದರೆ — ನಾವು ಒಂದು ಪ್ರಶ್ನೆ ಕೇಳಬೇಕು — ಉಳಿವವರೆಲ್ಲ ದುರನ್ವಯ ಕವಿಗಳೇ ? ಎಂದು. ಯಾಕೇಂದರೆ ಇವರಿಗೆ ಸಮನ್ವಯ ಕವಿಗಳೆಂದರೆ ಉಳಿದವರಿಗೂ ಒಂದು ಶಬ್ದವನ್ನು ಹುಡುಕಬೇಕಲ್ಲ ! ಒಬ್ಬರಿಗೇ ಏಕೆ ?

ನನ್ನ ದೃಷ್ಟಿಯಲ್ಲಿ ಹೀಗೆ ಒಬ್ಬನೇ ಒಬ್ಬ ಕವಿ ಕನ್ನಡದಲ್ಲಿದ್ದವರು. ಗೋಕಾಕ ರೊಬ್ಬರೇ. ಯಾಕೆಂದರೆ ಅವರದೇ Theory ಇದೆ, ಅವರದೇ construction ಇದೆ. ಉಳಿದವರು ಯಾರೂ ಅವರ ಸಿದ್ಧಾಂತ ಒಪ್ಪಿಕೊಂಡಿಲ್ಲ ಮತ್ತು ಯಾವ ಕವಿನೂ ಅದನ್ನು ಒಪ್ಪಿಕೊಳ್ಳುವದಿಲ್ಲ, ಕವಿಗಳು ನಿರಂಕುಶರು ; ಅವರಿಗೆ ಯಾವ ಸಿದ್ಧಾಂತದ ಬೇಡಿ ಬೇಕಾಗಿಲ್ಲ. ಇದರ ದೆಸೆಯಿಂದ ಅವರು ಸಮನ್ವಯ ಕವಿಗಳೋ !

ಒಳ್ಳೆಯ ಕವಿಗಳೂ ಅಷ್ಟೇನೇ. ಅಂಥ ಕವಿಗಳನ್ನು ನಿಮ್ಮಲ್ಲಿ ಬರಮಾಡಿ ಕೊಂಡು ಅವರ ಮಾತುಗಳನ್ನು ಪ್ರೀತಿಯಿಂದ ಕೇಳಿ, ಅವರಿಂದ ಸ್ಫೂರ್ತಿ ಪಡೆದು ನೀವೂ ಕೂಡ ನಮ್ಮ ಕನ್ನಡ ನಾಡಿಗೆ ಒಂದು ಸೇವೆಯನ್ನು ಸಲ್ಲಿಸುತ್ತೀರಿ ಮತ್ತು ನಿಮ್ಮ ಶ್ರೇಯವನ್ನೂ ಕೂಡ ಸಾಧಿಸುತ್ತೀರಿ ಎಂಬ ಆಶೆಯನ್ನು ಮಾಡಿ ನನ್ನ ಕೃತಜ್ಞತೆಗಳನ್ನು ಅರ್ಪಿಸಿ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.



ಕರ್ನಾಟಕ ಸಂಘ

ಕೆ. ಆರ್. ಬೆಲ್ಲದ ಕಾಲೇಜು, ಮುಂಡರಗಿ

**ಹಿನ್ನೋಟ :**

೧೯೮೩–೮೪ ಸಾವಿರ ವರ್ಷದ ಸಾಹಿತ್ಯ

೧೯೮೪–೮೫ ಆಧುನಿಕ ಕನ್ನಡ ಸಾಹಿತ್ಯ ಸಮೀಕ್ಷೆ

೧೯೮೫–೮೬ ಜಾನಪದ ಸಾಹಿತ್ಯ ಸಂಕಿರಣ

೧೯೮೬–೮೭ ಶರಣ ಸಾಹಿತ್ಯ ಸಮೀಕ್ಷೆ

೧೯೮೭–೮೮ ಜಾನಪದ ಗೋಷ್ಠಿ ಹಾಗೂ ರಂಗಸಂಪದ

೧೯೮೮–೮೯ ರಾಷ್ಟ್ರ ಧರ್ಮ ದೃಷ್ಟಾರ ಹರ್ಡೇಕರ ಮಂಜಪ್ಪನವರು
( ವಿಚಾರ ಸಂಕಿರಣ )

೧೯೮೯–೯೦ ಚೆನ್ನವೀರ ಕಣವಿ ಹಾಗೂ ಜಿ. ಎಸ್. ಶಿವರುದ್ರಪ್ಪ
ಅವರ ಕಾವ್ಯ ( ತೌಲನಿಕ ವಿವೇಚನೆ )

೧೯೯೦–೯೧ " ಸಂಪ್ರತಿ " ವಿಚಾರ ಸಂಕಿರಣ

೧೯೯೧–೯೨ ಡಾ. ವಿ. ಕೃ. ಗೋಕಾಕ : ಅಧ್ಯಯನ
(ವಿಚಾರ ಸಂಕಿರಣ )

**ಪ್ರಕಟಿತ ಗ್ರಂಥಗಳು :**

೧. ಆಧುನಿಕ ಕನ್ನಡ ಸಾಹಿತ್ಯ ಸಮೀಕ್ಷೆ

೨. ಹರ್ಡೇಕರ ಮಂಜಪ್ಪನವರು

೩. ಚೆನ್ನವೀರ ಕಣವಿ ಹಾಗೂ ಜಿ. ಎಸ್. ಶಿವರುದ್ರಪ್ಪ
ಅವರ ಕಾವ್ಯ [ ತೌಲನಿಕ ವಿವೇಚನೆ ]

ಹೊಸಗನ್ನಡ ಸಾಹಿತ್ಯಸಂದರ್ಭದಲ್ಲಿ ನವೋದಯ ಕ್ಷಿತಿಜದ ಮೇಲೆ ಕಾಣಿಸಿಕೊಂಡ ಕಣವಿ– ಶಿವರುದ್ರಪ್ಪನವರು, ಆಮೇಲಿನ 'ನವ್ಯಪ್ರಯೋಗ', 'ದಲಿತ–ಬಂಡಾಯ ಚಳುವಳಿ'ಗಳ ಗದ್ದಲದ ನಡುವೆಯೂ ಗಟ್ಟಿಯಾಗಿ ಕಾಲೂರಿ ನಿಂತು, ಘಟ್ಟದಿಂದ ಘಟ್ಟಕ್ಕೆ ಏರಿಬಂದ ಕಾರಣ, ಈ ಶಿಖರಸಾಹಿತಿಗಳು ಶಿಖರಗಳ ಶ್ರೇಣಿಯೂ ಎನಿಸಿದ್ದಾರೆ.

ನವೋದಯಕಾವ್ಯಕ್ಕೆ ಅರ್ಥ ತುಂಬಿದವರು ಕನ್ನಡ ಪ್ರಾಧ್ಯಾಪಕರಾದ ಬೇಂದ್ರೆ-ಕುವೆಂಪು, ನವ್ಯಕಾವ್ಯಕ್ಕೆ ಅರ್ಥ ತುಂಬಿದವರು ಇಂಗ್ಲಿಷ್ ಪ್ರಾಧ್ಯಾಪಕರಾದ ಗೋಕಾಕ– ಅಡಿಗ. ಕನ್ನಡದ ನೆಲೆಯಿಂದ ಮೂಡಿಬಂದ ಕಣವಿ–ಶಿವರುದ್ರಪ್ಪನವರು ಮಾತ್ರ ಅಲ್ಲಿ ಹುಟ್ಟಿ, ಇಲ್ಲಿ ಬೆಳೆಯುವ ಮೂಲಕ ಇಂಗ್ಲಿಷ್ ಪರಂಪರೆಯವರಿಗಿಂತ ಭಿನ್ನವಾದ ನವ್ಯಕವನಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಈ ವಿಶೇಷತೆಯಿಂದಾಗಿ ಕನ್ನಡ ಸಾಹಿತ್ಯದ ಅಖಂಡ ಪರಂಪರೆಯ ಒಂದು ಭಾಗವೆಂಬಂತೆ ತೋರುವ ಅವುಗಳನ್ನು ಓದುವಾಗ, ಪರಕೀಯತೆಯ ಅನುಭವ ಉಂಟಾಗುವುದೇ ಇಲ್ಲ.

ವ್ಯಕ್ತಿಗಿಂತ ಮನುಷ್ಯ, ಸಮಾಜಕ್ಕಿಂತ ಮಾನವ ಸಂಬಂಧದ ನೆಲೆಗಳಿಂದ ಇವರು ಕಾವ್ಯವಸ್ತುವನ್ನು ಆಯ್ದುಕೊಳ್ಳುತ್ತಾರೆ. ಇದು ಜೀವನದ ಬಗೆಗಿನ ಗಾಢ ಪ್ರೀತಿಯೂ ಹೌದು, ಸುರಕ್ಷಿತ ನೆಲೆಯ ಆಯ್ಕೆಯೂ ಹೌದು. ಇಂಥ ವಸ್ತುಗಳನ್ನು ಭಾಷೆಯ ಮೂಲಕ ನಿರ್ದಿಷ್ಟಗೊಳಿಸುವಲ್ಲಿ ಇವರಿಬ್ಬರು ಅನುಸರಿಸುವ ವಿಧಾನ ತುಂಬ ಸಂಯಮದ್ದಾಗಿದೆ. ಇದರಿಂದಾಗಿ ತಮ್ಮ ನವೋದಯ ಕವನಗಳು ಗೀತದಲ್ಲಿ ತೇಲಿ ಹೋಗಲು, ನವ್ಯ ಕವನಗಳು ಮಾತಿನಲ್ಲಿ ಮುಳುಗಿ ಹೋಗಲು ಇವರು ಅವಕಾಶ ಮಾಡಿಕೊಡುವುದಿಲ್ಲ. ಹೀಗಿದ್ದೂ ಶಿವರುದ್ರಪ್ಪನವರಲ್ಲಿ ಅನುಭವ ವೈವಿಧ್ಯ, ಕಣವಿಯವರಲ್ಲಿ ಶಿಲ್ಪವೈವಿಧ್ಯ ವಿಶೇಷವೆಂದೇ ಹೇಳಬೇಕು.

ಸಮಕಾಲೀನರಾದ ಕುವೆಂಪು ಮತ್ತು ಬೇಂದ್ರೆ, ಗೋಕಾಕ ಮತ್ತು ಅಡಿಗ– ಈ ಜೋಡಿಗಳು ತಮ್ಮ ತಮ್ಮ ಕಾಲಘಟ್ಟಗಳಲ್ಲಿ ಪರಸ್ಪರ ವಿಮುಖವಾಗಿಯೇ ಬೆಳೆದುದನ್ನು ನೆನೆದರೆ, ಸಮ್ಮುಖವಾಗಿ ಬೆಳೆದ ಕಣವಿ–ಶಿವರುದ್ರಪ್ಪ ಜೋಡಿಯ ಮಾನವಪ್ರೀತಿ ಅಪೂರ್ವವೆನಿಸುತ್ತದೆ.

ಮುಂಡರಗಿ, ಮೂಲೆಯಲ್ಲಿರುವ ಒಂದು ಹಳ್ಳಿ. ಪ್ರತಿವರ್ಷ ಅರ್ಥಪೂರ್ಣ ಕಾರ್ಯಕ್ರಮ ಜರುಗಿಸುತ್ತಿರುವುದು ಇಲ್ಲಿಯ ಕಾಲೇಜಿನ ವೈಶಿಷ್ಟ್ಯ, ಶಿವರುದ್ರಪ್ಪ-ಕಣವಿಯವರ ಕಾವ್ಯವನ್ನು ಕುರಿತ ವಿಚಾರ ಸಂಕಿರಣ ಇಲ್ಲಿ ಜರುಗಿದುದು ಈ ಕವಿಗಳ ಜನಪ್ರಿಯತೆಗೆ ಸಾಕ್ಷಿ, ಜರುಗಿಸಿದುದು ಈ ಕಾಲೇಜಿನ ಶೈಕ್ಷಣಿಕ ಆಸಕ್ತಿಗೆ ನಿದರ್ಶನ. ಇದು ಕನ್ನಡವನ್ನು ಕಾಯುವ ಕೆಲಸದ ಭಾಗವೇ ಆಗಿದ್ದು, ಸಣ್ಣ ಕಾಲೇಜಿನ ಈ ದೊಡ್ಡ ಸಂಪ್ರದಾಯ ಇತರ ಕಾಲೇಜುಗಳಿಗೆ ಮಾದರಿಯಾಗಲೆಂದು ಹಾರೈಸುತ್ತೇನೆ.

— ಎಂ. ಎಂ. ಕಲಬುರ್ಗಿ